(2) ನಿರ್ಣಯದ ಮೂಲಕ ಸ್ಥಳೀಯ ಪ್ರಾಧಿಕಾರವು ಬೀದಿ ವ್ಯಾಪಾರಿಗಳ ಸಂಘಗಳು, ಮಾರುಕಟ್ಟೆ ಮತ್ತು ವ್ಯಾಪಾರ ಸಂಘ, ಸರ್ಕಾರೇತರ ಸಂಘ ಸಂಸ್ಥೆ, ಸಮುದಾಯ ಆಧಾರಿತ ಸಂಘ, ನಿವಾಸಿಗಳ ಸಂಘ ಇತ್ಯಾಧಿಗಳಿಂದ ಸದಸ್ಯರ ನಾಮನಿರ್ದೇಶನ ವಿಧಾನದಿಂದ ಮುಂದಿನ ಯಾವುದೇ ಒಂದು ಪ್ರಕ್ರಿಯೆಯನ್ನು ಅನುಸರಿಸುವದರ ಮೂಲಕ ತೀರ್ಮಾನಿಸಬಹುದು.

(ಎ) ಪಟ್ಟಣ ವ್ಯಾಪಾರ ಸಮಿತಿಯ ಸರ್ಕಾರೇತರ ಸದಸ್ಯರಿಗೆ ಮತಪತ್ರದ ಆಧಾರದಲ್ಲಿ ಚುನಾವಣೆ ನಿರ್ಧರಿಸುವಲ್ಲಿ ಸ್ಥಳೀಯ ಪ್ರಾಧಿಕಾರದ ಚುನಾಯಿತ ಪ್ರತಿನಿಧಿಗೆ ಸಾಮಾನ್ಯವಾಗಿ ಅಳವಡಿಸಿಕೊಳ್ಳಲಾದ ಈ ಮುಂದಿನ ಪ್ರಕ್ರಿಯನುಸಾರ ಜಿಲ್ಲಾಧಿಕಾರಿಗಳು ಅಥವಾ ಅವರ ಪ್ರತಿನಿಧಿಗಳು ಸಂಸ್ಥೆವಾರು ಚುನಾವಣೆಯನ್ನು ನಡೆಸತಕ್ಕದ್ದು.

(ಬಿ) ಅದನ್ನು ಚೀಟಿ ಎತ್ತುವ ಮೂಲಕ ಆಯ್ಕೆಯನ್ನು ನಿರ್ಧರಿಸಬೇಕಾಗಿದ್ದಲ್ಲಿ, ಈ ಮುಂದಿನ ಕಾರ್ಯವಿಧಾನವನ್ನು ಅನುಸರಿಸತಕ್ಕದ್ದು ಎಂದರೆ:–

(i) ಪಟ್ಟಣ ವ್ಯಾಪಾರ ಸಮಿತಿಯ ಸದಸ್ಯತ್ವಕ್ಕಾಗಿ ಅರ್ಜಿಗಳನ್ನುಆಹ್ವಾನಿಸುವುದಕ್ಕಾಗಿ ಅದರ ಜಾಲತಾಣ/ ವೆಬ್‌ಸೈಟ್‌ನಲ್ಲಿ ಮತ್ತು ಆ ಯಾವುದೇ ಎರಡು ಪ್ರಮುಖ ಸ್ಥಳೀಯ ದಿನಪತ್ರಿಕೆಗಳಲ್ಲಿ ಸ್ಥಳೀಯ ಪ್ರಾಧಿಕಾರ ನೋಟೀಸನ್ನು ಪ್ರಕಟಿಸತಕ್ಕದ್ದು, ಸ್ಥಳೀಯ ಪ್ರಾಧಿಕಾರದ ಅಧಿಕಾರ ವ್ಯಾಪ್ತಿಯೊಳಗಿನ ಸ್ಥಳೀಯ ಮಾರುಕಟ್ಟೆ ಅಥವಾ ಮಾರುಕಟ್ಟೆಗಳಲ್ಲಿ ಯಾವುದೇ ಎದ್ದು ಕಾಣುವ ಸ್ಥಳದಲ್ಲಿ ಸಹಆ ನೋಟೀಸಿನ ಪ್ರತಿಯನ್ನು ಪ್ರದರ್ಶಿಸತಕ್ಕದ್ದು.

(ii) ಪ್ರಕಟಗೊಂಡ ಅಂಥ ನೋಟೀಸು, ಇತರ ವಿಷಯಗಳೊಂದಿಗೆ, ಪ್ರಕಟಣೆಯ ದಿನಾಂಕ, ಅರ್ಜಿಯ ನಮೂನೆ, ಅಭ್ಯರ್ಥಿಯ ವಿದ್ಯಾರ್ಹತೆ, ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ ಮತ್ತು ಅರ್ಜಿ ಸಲ್ಲಿಸುವ ವಿಧಾನಗಳನ್ನು ಒಳಗೊಂಡಿರತಕ್ಕದ್ದು.

(iii) ಸಮಿತಿಯ ಸದಸ್ಯತ್ವಕ್ಕಾಗಿ ಅರ್ಜಿಗಳನ್ನು ಸಲ್ಲಿಸುವುದಕ್ಕಾಗಿ ಇರುವ ಕೊನೆಯ ದಿನಾಂಕಕ್ಕಿಂತ ಮೂವತ್ತು ದಿನಗಳ ಮುಂಚಿತವಾಗಿಯೇ ನೋಟೀಸನ್ನು ಪ್ರಕಟಿಸತಕ್ಕದ್ದು.

(iv) ಬೀದಿ ವ್ಯಾಪಾರಿಗಳ ಯಾವುದೇ ಸಂಘದ, ಮಾರುಕಟ್ಟೆ ಸಂಘದ, ವ್ಯಾಪಾರಿ ಸಂಘ, ಸರ್ಕಾರೇತರ ಸಂಘಟನೆಗಳ ಮತ್ತು ಸಮುದಾಯ ಆಧಾರಿತ ಸಂಘಟನೆಯ ಮತ್ತು ನಿವಾಸಿಗಳ ಕ್ಷೇಮಾಭಿವೃದ್ಧಿ ಸಂಘದ ಸದಸ್ಯನಾಗಿರುವ ಯಾರೇ ವ್ಯಕ್ತಿಯು, ಸಮಿತಿಯ ಸದಸ್ಯತ್ವಕ್ಕಾಗಿ ಅರ್ಜಿ ಸಲ್ಲಿಸಲು ಅರ್ಹನಾಗಿರುತ್ತಾನೆ.

ಪರಂತು, ಅಂಥ ವ್ಯಕ್ತಿಯು ಹದಿನೆಂಟು ವರ್ಷ ವಯಸ್ಸನ್ನು ಪೂರ್ಣಗೊಳಿಸಿರಬೇಕು ಮತ್ತು ಸಾರ್ವತ್ರಿಕ ಚುನಾವಣೆಯಲ್ಲಿ ಸ್ಪರ್ಧಿಸಲು ಅಸಮರ್ಥವೆಂದು ಘೋಷಿಸಿ ಯಾವುದೇ ಕ್ರಿಮಿನಲ್ ಅಪರಾಧಕ್ಕಾಗಿ ಯಾವುದೇ ಕಾನೂನು ನ್ಯಾಯಾಲಯದಿಂದ ಅಪರಾಧಿ ಎಂದು ನಿರ್ಣೀತನಾಗಿರಬಾರದು.

(v) ಸ್ಥಳೀಯ ಪ್ರಾಧಿಕಾರವು ಅರ್ಜಿದಾರನ ವಿವರಗಳಿಗೆ ಸಂಬಂಧಪಟ್ಟವುಗಳನ್ನು ಮತ್ತು ಕೆಲಸದ ಅನುಭವದ ವಿವರಗಳನ್ನು, ಅದರಲ್ಲೂ ನಿರ್ದಿಷ್ಟವಾಗಿ ಅನೌಪಚಾರಿಕ ಮಾರುಕಟ್ಟೆಯ ಕ್ಷೇತ್ರದಲ್ಲಿ ಅಥವಾ ಸ್ಥಳೀಯ ಪ್ರಾಧಿಕಾರದ ಅಧಿಕಾರ ವ್ಯಾಪ್ತಿಯೊಳಗಿನ ಮಾರುಕಟ್ಟೆಗಳ ಮತ್ತು ಬೀದಿ ವ್ಯಾಪಾರಿಗಳ ಮಾಹಿತಿಯನ್ನು ಕೋರಬಹುದು ಮತ್ತು ಅದು ಸೂಕ್ತವೆಂದು ಭಾವಿಸಬಹುದಾದಂಥ ಇತರ ಮಾಹಿತಿಗಳನ್ನು ಸಹ ಕೋರಬಹುದು.

(vi) ಸ್ಥಳೀಯ ಪ್ರಾಧಿಕಾರ, ಅಂಥ ಅರ್ಜಿಗಳನ್ನು ಸ್ವೀಕರಿಸಿದ ಮೇಲೆ, ಪ್ರತಿಯೊಂದು ಅರ್ಜಿಗೆ ಒಂದು ವಿಶಿಷ್ಟ ಸಂಖ್ಯೆಯನ್ನು ಹಂಚಿಕೆ ಮಾಡತಕ್ಕದ್ದು ಮತ್ತುಹಾಗೆ ಹಂಚಿಕೆ ಮಾಡಿದ ಪ್ರತಿಯೊಬ್ಬ ಅರ್ಜಿದಾರನಿಗೆ ಅದನ್ನು ತಿಳಿಸತಕ್ಕದ್ದು, ಮತ್ತು

(vii) ನಿರ್ದಿಷ್ಟ ಪ್ರವರ್ಗಕ್ಕಾಗಿ ಅಗತ್ಯಪಡಿಸಿದ ಸಂಖ್ಯೆಗಳಿಗಿಂತ ಹೆಚ್ಚಿನ ಸಂಖ್ಯೆಯ ಅರ್ಜಿಗಳನ್ನು ಸ್ವೀಕರಿಸಿದ್ದರೆ,ಸ್ಥಳೀಯ ಪ್ರಾಧಿಕಾರ ಲಾಟರಿ ಎತ್ತುವ ಆಧಾರದ ಮೇಲೆ ಸದಸ್ಯರನ್ನು ಆಯ್ಕೆ ಮಾಡತಕ್ಕದ್ದು. ಅಂಥ ಲಾಟರಿ ಎತ್ತುವ ಅಥವಾ ಹೆಚ್ಚು ಅನುಭವದ ಆಧಾರದ ಮೇಲೆ ಹಿತಾಸಕ್ತಿ ಹೊಂದಿರುವ ಪಕ್ಷಕಾರರ ಹಾಜರಾತಿಯನ್ನು ನಡೆಸತಕ್ಕದ್ದು.

(3) ಪಟ್ಟಣ ವ್ಯಾಪಾರ ಸಮಿತಿಯ ಸದಸ್ಯರುಗಳಿಗಾಗಿ ಚುನಾವಣೆಯನ್ನು ಬೀದಿ ವ್ಯಾಪಾರಿಗಳಿಂದ ಈ ನಿಯಮಗಳಿಗೆ ಸೇರಿಸಿದ ಅನುಸೂಚಿಯಲ್ಲಿ ಉಪಬಂಧಿಸಿದ ರೀತಿಯಲ್ಲಿ ನಡೆಸತಕ್ಕದ್ದು.

(4) ಸಮಿತಿಗೆ ರಾಷ್ಟ್ರೀಯ ಪ್ರಮುಖ ಬ್ಯಾಂಕ್ ಸದಸ್ಯರಾಗಿ ಅದರ ನೌಕರರ ಒಬ್ಬರನ್ನು ನಾಮ ನಿರ್ದೇಶಿಸತಕ್ಕದ್ದು.

(5) ಸ್ಥಳೀಯ ಪ್ರಾಧಿಕಾರವು, ಮೇಲೆ ಹೇಳಲಾದ ಮಾಹಿತಿಯನ್ನು ಮತ್ತು ಪಟ್ಟಣ ವ್ಯಾಪಾರ ಸಮಿತಿಯ ನಾಮ ನಿರ್ದೇಶಿತ ಸದಸ್ಯರ ಪಟ್ಟಿಯನ್ನು ಅದರ ವೆಬ್‌ಸೈಟಿನಲ್ಲಿ ಸಮಿತಿಯ ಸದಸ್ಯತ್ವಕ್ಕಾಗಿ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕದಿಂದ ಮೂವತ್ತು ದಿನಗಳೊಳಗೆ ಪ್ರಕಟಿಸತಕ್ಕದ್ದು.

(6) ಪಟ್ಟಣ ವ್ಯಾಪಾರ ಸಮಿತಿಯ ರಚನೆಯನ್ನು (ಸರ್ಕಾರಿ ಮತ್ತು ಸರ್ಕಾರೇತರ ಸದಸ್ಯರುಗಳು ಇಬ್ಬರನ್ನು) ಅಧಿಕೃತ ರಾಜ್ಯ ಪತ್ರದಲ್ಲಿ ರಾಜ್ಯ ಸರ್ಕಾರ ಪ್ರಕಟಿಸತಕ್ಕದ್ದು.

**6. ಪಟ್ಟಣ ವ್ಯಾಪಾರ ಸಮಿತಿಯ ಕಾಲಾವಧಿ,–** (1) ಪಟ್ಟಣ ವ್ಯಾಪಾರ ಸಮಿತಿಯ ಅವಧಿಯು, ಅದರ ರಚನೆಯಾದ ದಿನಾಂಕದಿಂದ ಮೂರು ವರ್ಷಗಳ ಅವಧಿಯಾಗಿರತಕ್ಕದ್ದು.

(2) ಪಟ್ಟಣ ವ್ಯಾಪಾರ ಸಮಿತಿಯ ಹೊಸದಾಗಿ ರಚನೆಯಾಗುವ ಕಾರ್ಯವಿಧಾನವು ಅಸ್ತಿತ್ವದಲ್ಲಿರುವ ಸಮಿತಿಯ ಅವಧಿ ಮುಕ್ತಾಯವಾಗುವ ಮುಂಚೆ ಪೂರ್ಣಗೊಳ್ಳತಕ್ಕದ್ದು.

**7. ಪಟ್ಟಣ ಮಾರಾಟ ಸಮಿತಿಯ ಸದಸ್ಯರನ್ನು ತೆಗೆದುಹಾಕುವುದು.–** ರಾಜ್ಯ ಸರ್ಕಾರದ ಅಭಿಪ್ರಾಯದಲ್ಲಿ, ಪಟ್ಟಣ ಮಾರಾಟ ಸಮಿತಿಯ ಯಾರೇ ಸದಸ್ಯರುಗಳು ಸತತವಾಗಿ ಅಧಿನಿಯಮ ಅಥವಾ ನಿಯಮಗಳ ಮೂಲಕ ಅಥವಾ ಅವುಗಳ ಮೇರೆಗೆ ಆತನಿಗೆ ವಹಿಸಿದ ತನ್ನ ಕರ್ತವ್ಯಗಳನ್ನು ನಿರ್ವಹಿಸುವಲ್ಲಿ ತಪ್ಪಿದರೆ ಅಥವಾ ಸಮಿತಿಯು ನೀಡಿದ ಅಧಿಕಾರಗಳನ್ನು ಮೀರಿದರೆ ಅಥವಾ ದುರುಪಯೋಗಪಡಿಸಿಕೊಂಡರೆ, ಆಗ, ರಾಜ್ಯ ಸರ್ಕಾರವು ಆದೇಶದ ಮೂಲಕ ಅಂಥ ಸದಸ್ಯನನ್ನು ಪಟ್ಟಣ ಮಾರಾಟ ಸಮಿತಿಯ ಸದಸ್ಯತ್ವದಿಂದ ತೆಗೆದುಹಾಕಬಹುದು:

ಸದಸ್ಯತ್ವದಿಂದ ತೆಗೆದುಹಾಕುವ ಆದೇಶವನ್ನು ಹೊರಡಿಸುವ ಮೊದಲು, ಅಂಥ ಸದಸ್ಯನಿಗೆ ಅಹವಾಲನ್ನು ಹೇಳಿಕೊಳ್ಳಲು ಒಂದು ಯುಕ್ತ ಅವಕಾಶವನ್ನು ನೀಡತಕ್ಕದ್ದು.

**೮. ಖಾಲಿ ಹುದ್ದೆಯನ್ನು ಭರ್ತಿ ಮಾಡುವ ವಿಧಾನ.–** ಯಾವುದೇ ಸದಸ್ಯನ ರಾಜೀನಾಮೆ, ಮರಣ, ತೆಗೆದುಹಾಕುವಿಕೆಯ ಕಾರಣದಿಂದ ಅಥವಾ ಯಾವುದೇ ಇತರ ಕಾರಣಕ್ಕಾಗಿ ಅಸ್ಥಿತ್ವರುವ ಪಟ್ಟಣ ಮಾರಾಟ ಸಮಿತಿಯಲ್ಲಿ ಯಾವುದೇ ಖಾಲಿ ಹುದ್ದೆ ಉಂಟಾದಲ್ಲಿ, ಅದನ್ನು 5ನೇ ನಿಯಮಗಳಲ್ಲಿ ಹೇಳಲಾದ ಅದೇ ಪ್ರಕ್ರಿಯೆ ಅನುಸಾರ ಅಂಥ ಖಾಲಿ ಹುದ್ದೆಗಳನ್ನು ತುಂಬಲು ಅನುಸರಿಸತಕ್ಕದ್ದು.

**9. ಪಟ್ಟಣ ಮಾರಾಟ ಸಮಿತಿಯ ಸಭೆಯ ಪ್ರಕ್ರಿಯೆ.–**(1) ಪಟ್ಟಣ ಮಾರಾಟ ಸಮಿತಿಯು ಅದರ ಮೊದಲ ಸಭೆಯಲ್ಲಿ, ಅದರ ವ್ಯವಹಾರಗಳ ನಿರ್ವಹಣೆಗೆ ಸಂಬಂಧಿಸಿದಂತೆ ವಿವಿಧ ಪ್ರಕ್ರಿಯಾಂಶಗಳನ್ನು ಕುರಿತು ನಿರ್ಧರಿಸತಕ್ಕದ್ದು.

(2) ಸಭೆಯ ಸಮಯ ಮತ್ತು ಸ್ಥಳವನ್ನು ಅಧ್ಯಕ್ಷರು ನಿರ್ಧರಿಸತಕ್ಕದ್ದು.

(3) ಸದಸ್ಯ ಕಾರ್ಯದರ್ಶಿಯು ನಿಗದಿತ ಸಭೆ ನಡೆಯುವ ಏಳು ದಿನಗಳ ಮುಂಚಿತವಾಗಿ ನಿಗದಿಪಡಿಸಿದ ಸಭೆಯ ನೋಟೀಸನ್ನು ನೀಡತಕ್ಕದ್ದು.

(4) ಸಭೆಯಲ್ಲಿ ಚರ್ಚಿಸಬೇಕಾದ ವಿಷಯಗಳ ಕಾರ್ಯಸೂಚಿಯನ್ನು ಸದಸ್ಯರಿಗೆ ಕಳುಹಿಸತಕ್ಕದ್ದು ಮತ್ತು ಅಧಿಕೃತವಾಗಿ ಗೊತ್ತುಪಡಿಸಿದ ಜಾಲತಾಣದಲ್ಲಿ ಅದನ್ನು ಪ್ರಕಟಿಸತಕ್ಕದ್ದು. ಪ್ರತಿಯೊಂದು ಕಾರ್ಯಸೂಚಿ ವಿಷಯಾಂಶದ ಜೊತೆಗೆ ಆಡಳಿತ ಮಂಡಳಿಯು ಮಾಡಿದ ಸ್ಪಷ್ಟ ಶಿಫಾರಸ್ಸು ಯಾವುದಾದರೂ ಇದ್ದರೆ ಅದಕ್ಕೆ ಸಂಬಂಧಿಸಿದ ವಿಷಯಗಳನ್ನು ವ್ಯಕ್ತಪಡಿಸಿ ಸವಿವರವಾದ ಒಂದು ಟಪ್ಪಣಿಯನ್ನು ನೀಡತಕ್ಕದ್ದು. ಟಿಪ್ಪಣಿಗಳನ್ನು ಒಳಗೊಂಡ ಕಾರ್ಯಸೂಚಿ ಪತ್ರಗಳು ಸ್ಥಳೀಯ ಭಾಷೆಯಲ್ಲಿರತಕ್ಕದ್ದು.

(5) ಸಮಿತಿಯ ಒಟ್ಟು ಸದಸ್ಯರ ಸಂಖ್ಯೆಯ ಮೂರನೇ ಎರಡರಷ್ಟು ಸದಸ್ಯರಿಂದ ಸಭೆಯ ಅವಶ್ಯ ಸಂಖ್ಯೆ (ಕೋರಂ) ಆಗಿರತಕ್ಕದ್ದು.

(6) ಸಭೆಯಲ್ಲಿ ಹಾಜರಿರುವ ಸದಸ್ಯರ ಬಹುಮತದ ಆಧಾರದ ಮೇಲೆ ನಿರ್ಣಯವನ್ನು ತೆಗೆದುಕೊಳ್ಳತಕ್ಕದ್ದು.

(7) ಅವಶ್ಯ ಸಂಖ್ಯೆ (ಕೋರಂ) ಇಲ್ಲದಿರುವಲ್ಲಿ ಯಾವುದೇ ಸಭೆಯನ್ನು ನಡೆಸತಕ್ಕದ್ದಲ್ಲ ಮತ್ತು ಅವಶ್ಯ ಸಂಖ್ಯೆ (ಕೋರಂ) ಇಲ್ಲದಿರುವಲ್ಲಿ ಸಭೆಯನ್ನು ಮಂದೂಡತಕ್ಕದ್ದು.

(8) ಸಭೆಯ ನಡವಳಿಗಳಿಗೆ ಅಧ್ಯಕ್ಷರು ಸಹಿ ಮಾಡತಕ್ಕದ್ದು ಮತ್ತು ಸ್ಥಿರೀಕರಣಕ್ಕಾಗಿ ಸಮಿತಿಯ ತರುವಾಯದ ಸಭೆಯಲ್ಲಿ ಮಂಡಿಸತಕ್ಕದ್ದು.

(9) ಸಭೆಯ ನಡವಳಿಗಳನ್ನು ಸ್ಥಳೀಯ ನಿಕಾಯದ/ಸಂಸ್ಥೆಯ ಜಾಲತಾಣದಲ್ಲಿ (website) ಪ್ರಕಟಿಸತಕ್ಕದ್ದು ಅಥವಾ ಪಟ್ಟಣ ಮಾರಾಟ ಸಮಿತಿಯು ತನ್ನ ಸ್ವಂತ ಜಾಲತಾಣವನ್ನು (website) ಹೊಂದಲು ನಿರ್ಧರಿಸಬಹುದು.

(10) ಸಮಿತಿಯ ಸಭೆಯನ್ನು ಕಡೇ ಪಕ್ಷ ಪ್ರತಿ ಎರಡು ತಿಂಗಳುಗಳಿಗೊಮ್ಮೆ ನಡೆಸತಕ್ಕದ್ದು.

(11) ಹೊಸದಾಗಿ ರಚಿಸಿದ ಸಮಿತಿಯ ಮೊದಲ ಸಭೆಯನ್ನು, ಅದನ್ನು ರಚಿಸಿದ ದಿನಾಂಕದಿಂದ ಹದಿನೈದು ದಿನಗಳ ಒಳಗಾಗಿ ನಿಗದಿಪಡಿಸತಕ್ಕದ್ದು.

**10. ಸದಸ್ಯರ ಅನರ್ಹತೆ.–**ಪಟ್ಟಣ ಮಾರಾಟ ಸಮಿತಿಯ ಸದಸ್ಯನ ಗೈರುಹಾಜರಿ ರಜೆ ಮತ್ತು ಅನರ್ಹತೆಯನ್ನು ಈ ಮುಂದಿನ ರೀತಿಯಲ್ಲಿ ನಿರ್ಧರಿಸತಕ್ಕದ್ದು, ಎಂದರೆ:–

(1) ತುರ್ತು ಸಂದರ್ಭದಲ್ಲಿ ಒಬ್ಬ ಸದಸ್ಯ ಸಮಿತಿಯ ಅಧ್ಯಕ್ಷರ ಪೂರ್ವಾನುಮೋದನೆಯೊಂದಿಗೆ ಸಭೆಗೆ ಗೈರುಹಾಜರಾಗಬಹುದು.

(2) (ಎ) ಸದಸ್ಯನು ಅನುಮತಿಯಿಲ್ಲದೆ ಮೂರು ನಿರಂತರ ಸಭೆಗಳಿಗೆ ಗೈರುಹಾಜರಾದಾಗ, ಅಧ್ಯಕ್ಷರು ಸಭೆಗಳಿಗೆ ಆತನು ಗೈರುಹಾಜರಾಗಿದ್ದಕ್ಕಾಗಿ ಕಾರಣಗಳನ್ನು ಎರಡು ವಾರಗಳ ಒಳಗಾಗಿ ವಿವರಿಸಲು ಅಂಥ ಸದಸ್ಯನಿಗೆ ಕಾರಣ ತೋರಿಸುವ ನೋಟೀಸನ್ನು ನೀಡತಕ್ಕದ್ದು. ಅಂಥ ಸದಸ್ಯನು ತೃಪ್ತಿಕರ ವಿವರಣೆ ಕಾರಣವನ್ನು ನೀಡಿದರೆ, ಆತನಿಗೆ ಎಚ್ಚರಿಕೆ ನೀಡುವುದರೊಂದಿಗೆ ಸದಸ್ಯನಾಗಿ ಮುಂದುವರಿಯಬಹುದು;

(ಬಿ) ಸಭೆಗಳಿಗೆ ತಾನು ಗೈರುಹಾಜರಾಗಿದ್ದಕ್ಕಾಗಿ ಅಂಥ ಸದಸ್ಯನು ಯಾವುದೇ ತೃಪ್ತಿಕರ ಕಾರಣವನ್ನು ನೀಡಲು ವಿಫಲನಾದಲ್ಲಿ ಅಥವಾ ಗೊತ್ತುಪಡಿಸಿದ ಅವಧಿಯೊಳಗಾಗಿ ಕಾರಣವನ್ನು ತೋರಿಸಿ ಉತ್ತರ ನೀಡದಿದ್ದಲ್ಲಿ, ಸಮಿತಿಯ ಆತನ ಸದಸ್ಯತ್ವವು ಕೊನೆಗೊಳ್ಳತಕ್ಕದ್ದು ಮತ್ತು ಅಂಥ ಸದಸ್ಯತ್ವವನ್ನು ಕೊನೆಗೊಳಿಸುವ ಆದೇಶವನ್ನು ಪಟ್ಟಣ ಮಾರಾಟ ಸಮಿತಿಯು ಅಂಥ ಸದಸ್ಯನಿಗೆ ತಿಳಿಸತಕ್ಕದ್ದು.

(3) ಯಾವುದೇ ಆಪರಾಧಿಕ (ಕ್ರಿಮಿನಲ್) ಚಟುವಟಿಕೆಯಲ್ಲಿ ಅಪರಾಧಿ ಎಂದು ನಿರ್ಣಯಿಸಿದ್ದರೆ ಯಾರೇ ಸದಸ್ಯನು ಸಮಿತಿಯ ತನ್ನ ಸದಸ್ಯತ್ವವನ್ನು ಕಳೆದುಕೊಳ್ಳತಕ್ಕದ್ದು.

(4) ಸಮಿತಿಯ ತನ್ನ ಸದಸ್ಯತ್ವವನ್ನು ಕಳೆದುಕೊಳ್ಳುವ ಯಾರೇ ಸದಸ್ಯನು, ಪದದಿಂದ ತೆಗೆದುಹಾಕುವ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಒಂದು ತಿಂಗಳ ಒಳಗಾಗಿ ರಾಜ್ಯ ಸರ್ಕಾರಕ್ಕೆ ಅಪೀಲನ್ನು ಸಲ್ಲಿಸಬಹುದು. ಎರಡೂ ಪಕ್ಷಕಾರರಿಗೆ ಅಹವಾಲನ್ನು ಹೇಳಿಕೊಳ್ಳುವ ಒಂದು ಯುಕ್ತ ಅವಕಾಶವನ್ನು ನೀಡಿದ ತರುವಾಯ ರಾಜ್ಯ ಸರ್ಕಾರವು ಅಪೀಲಿನ ಸಂಬಂಧದಲ್ಲಿ ನಿರ್ಣಯವನ್ನು ತೆಗೆದುಕೊಳ್ಳತಕ್ಕದ್ದು ಮತ್ತು ಅದರ ಬಗೆಗಿನ ಸರ್ಕಾರದ ತೀರ್ಮಾನವು ಅಂತಿಮವಾಗಿರತಕ್ಕದ್ದು.

**11. ಸ್ಥಿತಿಗತಿ ಪತ್ರ ಮತ್ತು ಬೀದಿ ಮಾರಾಟ ಸ್ಥಿತಿಗತಿಯನ್ನು ಸ್ಥಳೀಯ ಪ್ರಾಧಿಕಾರವು ಒದಗಿಸತಕ್ಕದ್ದು.–** ಪಟ್ಟಣ ಮಾರಾಟ ಸಮಿತಿಯು ಪ್ರಕ್ರಿಯಾ ವಿವರಗಳನ್ನು ಅಂತಿಮಗೊಳಿಸಿದ ನಂತರ, ಮತ್ತು ಅದು ನಿಯಮಿತ ವ್ಯವಹಾರಗಳನ್ನು ಕೈಗೆತ್ತಿಕೊಳ್ಳುವ ಮೊದಲು, ಸ್ಥಳೀಯ ಪ್ರಾಧಿಕಾರವು, ಈ ಮುಂದಿನ ವಿವರಗಳನ್ನು ಒಳಗೊಂಡ ನಗರ ಅಥವಾ ಪಟ್ಟಣದಲ್ಲಿನ ಬೀದಿ ಮಾರಾಟದ ಸ್ಥಿತಿಗತಿ ಕುರಿತು ಒಂದು ಸ್ಥಿತಿಗತಿ ಪತ್ರವನ್ನು ಸಮಿತಿಯ ಸದಸ್ಯರಿಗೆ ರವಾನಿಸತಕ್ಕದ್ದು, ಎಂದರೆ:–

(i) ನಕ್ಷೆಯಲ್ಲಿ ಸೂಚಿಸಿದ ನಗರ ಅಥವಾ ಪಟ್ಟಣದಲ್ಲಿ ಬೀದಿ ಮಾರಾಟ ನಡೆಯುವ ಸ್ಥಳಗಳ ವಿವರ;

(ii) ಈಗಾಗಲೇ ಸಮೀಕ್ಷೆಯನ್ನು ನಡೆಸಲಾಗಿದ್ದಲ್ಲಿ, ನಗರ ಅಥವಾ ಪಟ್ಟಣದಲ್ಲಿರುವ ಬೀದಿ ಮಾರಾಟಗಾರರ ಸಂಖ್ಯೆ, ಸಮೀಕ್ಷೆ ನಡಸದೇ ಇದ್ದಲ್ಲಿ, ಅಂದಾಜು ಬೀದಿ ಮಾರಾಟಗಾರರನ್ನು ಸೂಚಿಸುವ ಸಂಖ್ಯೆ;

(iii) ಬೀದಿ ಮಾರಾಟದ ದೃಷ್ಟಿಕೋನದಿಂದ, ಬೀದಿ ಮಾರಾಟಗಾರರು ಹೆಚ್ಚಾಗಿ ತಿರುಗಾಡುವ ಪ್ರದೇಶಗಳು, ಕಡಿಮೆ ತಿರುಗಾಡುವ ಪ್ರದೇಶಗಳು ಮತ್ತು ಮಧ್ಯಮ ಶ್ರೇಣಿಯ ಪ್ರದೇಶಗಳ ಬಗ್ಗೆ ಮಾಹಿತಿ;

(iv) ಋತುಮಾನಿಕ ಬೀದಿ ಮಾರಾಟದ ಪ್ರದೇಶಗಳು, ಪ್ರತಿಸ್ಥಾಪಿತ ಮಾರುಕಟ್ಟೆ ಪ್ರದೇಶಗಳು, ರಾತ್ರಿ ಬಜ಼ಾರುಗಳು ನಡೆಯುವ ಪ್ರದೇಶಗಳು, ಅಭಿವೃದ್ಧಿ ಹೊಂದುತ್ತಿರುವ ಪ್ರದೇಶಗಳಲ್ಲಿ ಹೆಚ್ಚಾಗಿ ಬೀದಿ ಮಾರಾಟಗಾರರು ತಿರುಗಾಡುವ ಸ್ಥಳಗಳ ವಿವರ.

(v) ಮಾರಾಟ ಮಾಡಿದ ವಸ್ತುಗಳ ಪೂರ್ಣ ಪ್ರಮಾಣ

(vi) ಸಂಚಾರದ ದೃಷ್ಟಿ ಕೋನದಿಂದ ಉಂಟಾಗುವ ಆ ಪ್ರದೇಶಗಳ ಸಮಸ್ಯೆಗಳು.

(vii) ಆಹಾರ ಕಲಬೆರಕೆ ನಿವಾರಣೆ ಅಧಿನಿಯಮ, 1954ರ ಉಪಬಂಧಗಳ ಸಂಬಂಧಪಟ್ಟವಿವರ ನಮೂದನೆ, ಮತ್ತು

(viii) ಬೀದಿ ವ್ಯಾಪಾರಿಗಳು ಅಗತ್ಯವಾಗಿ ತೆಗೆದುಕೊಳ್ಳಬೇಕಾದ ಜಾಗರೂಕತೆ ಎಂದರೆ ಆರೋಗ್ಯ ಮತ್ತು ನೈರ್ಮಲ್ಯಗಳ ಅಂಶಗಳ ವಿವರ ನಮೂದನೆ.

**ವಿವರಣೆ**:–ಸಾಧ್ಯವಾದಷ್ಟು ವಿಸ್ತರಿಸಲು ಇಂದಿನವರೆಗೆ ನಿರ್ವಹಿಸಿದ ದತ್ತಾಂಶವನ್ನು ಅಧಿಪ್ರಮಾಣೀಕರಿಸಲಾಗಿದೆ ಎಂಬುದನ್ನು ಖಾತರಿಪಡಿಸಿಕೊಳ್ಳಲು ಕ್ರಮವನ್ನು ತೆಗೆದುಕೊಳ್ಳಬೇಕು. ತೀರ್ಮಾನವನ್ನು ತೆಗೆದುಕೊಳ್ಳಲು ಸಮಿತಿಯು ಸೌಲಭ್ಯ ಕಲ್ಪಿಸಲು ಎಲ್ಲೆಗೆರೆ ದತ್ತಾಂಶ (Line Data) ಆಧಾರದಿಂದ ಇದು ವಾಸ್ತವಿಕವಾಗಿರುವುದು.

ಸಮಿತಿಯು ಹಾಗೇ ಬಯಸಿದರೆ ಡಿಜಿಟಲ್ ನಮೂನೆಯಲ್ಲಿ ಈ ದತ್ತಾಂಶ ಆಧಾರಗಳನ್ನು (Database) ಹಾಜರುಪಡಿಸುವುದು.

**12. ಪಟ್ಟಣ ವ್ಯಾಪಾರ ಸಮಿತಿಯ ಕರ್ತವ್ಯಗಳು.**–ಈ ಅಧಿನಿಯಮದ ಯಾವುದೇ ಇತರ ಉಪಬಂಧಗಳಿಗೆ ಬಾದಕವಾಗದಂತೆ ಪಟ್ಟಣ ವ್ಯಾಪಾರ ಸಮಿತಿಯು ಈ ಮುಂದಿನ ಪ್ರಕಾರ್ಯಗಳನ್ನು ಮತ್ತು ಕರ್ತವ್ಯಗಳನ್ನು ನೆರವೇರಿಸತಕ್ಕದ್ದು ಎಂದರೆ:–

(i) ಬೀದಿ ವ್ಯಾಪಾರಿಗಳಿಗಾಗಿ ಸಮೀಕ್ಷೆ ನಡೆಸುವುದು ಮತ್ತು ಸ್ಥಳೀಯ ಪ್ರಾಧಿಕಾರದಿಂದ ಹೊರಗೆ ಕೆಲಸ ಮಾಡುತ್ತಿರುವ ಅವರ ಸಾಮರ್ಥ್ಯವನ್ನು ಹೊಂದಿರುವವರನ್ನು ಸೇರಿದಂತೆ ವ್ಯಾಪಾರಿ ವಲಯಗಳ ಬಗ್ಗೆ ಅಂತಿಮ ನಿರ್ಣಯವನ್ನು ತೆಗೆದುಕೊಳ್ಳುವುದು.

ವಿವರಣೆ:–ವ್ಯಾಪಾರಿ ವಲಯಗಳನ್ನು ನಿರ್ಧರಿಸುವುದಕ್ಕಾಗಿ, ಸಮಿತಿಯು, ಸ್ಥಳೀಯ ಪ್ರಾಧಿಕಾರದಿಂದ ಮೂಲ ಸಾಮಾಗ್ರಿಗಳನ್ನು ಅಥವಾ ದತ್ತಾಂಶಗಳನ್ನು ಹೊಂದಿರತಕ್ಕದ್ದು. ಉಪ ನಿಧಿಗಳು ಮತ್ತು ಯೋಜನೆಗಳು ವ್ಯಾಪಾರಿ ವಲಯಗಳನ್ನು ಗುರುತಿಸುವುದು.

(ii) ಸಮಿತಿಯು, ಪ್ರತ್ಯೇಕವಾಗಿ ವ್ಯಾಪಾರಿಗೆ ಹಂಚಿಕೆ ಮಾಡಬೇಕಾದ ವಲಯ ಅಥವಾ ಪ್ರದೇಶವನ್ನು ಬದಲಾವಣೆ ಮಾಡುವುದು ಅದಕ್ಕೆ ಅವಶ್ಯವೆಂದು ಪರಿಗಣಿಸಿದಲ್ಲಿ, ಯೋಜನೆಯನ್ನು ಸೂಕ್ತವಾಗಿ ಮಾರ್ಪಾಡು ಮಾಡುವುದಕ್ಕೆ ಸ್ಥಳೀಯ ಪ್ರಾಧಿಕಾರದ ಗಮನಕ್ಕೆ ಅದನ್ನು ತರಬಹುದು. ಸ್ಥಳೀಯ ಪ್ರಾಧಿಕಾರದ ಅಭಿಪ್ರಾಯವನ್ನು ಪಡೆದುಕೊಂಡು ತರುವಾಯ ಸಮಿತಿಯು ಅದರ ಮೇಲೆ ಅಂತಿಮ ನಿರ್ಣಯವನ್ನು ತೆಗೆದುಕೊಳ್ಳತಕ್ಕದ್ದು.

(iii) ವ್ಯಾಪಾರಿ ವಲಯಗಳಲ್ಲಿ ಯಾವುದೇ ಬದಲಾವಣೆಯ ಮಾಡುವ ಬಗ್ಗೆ ಶಿಫಾರಸ್ಸುಗಳನ್ನು ಮತ್ತು ಸಲಹೆಗಳನ್ನು ಮಾಡುವಾಗ ಸಮಿತಿಯು ಸಂಬಂಧಪಟ್ಟ ಪ್ರದೇಶದಲ್ಲಿ ರಸ್ತೆ ಅಗಲೀಕರಣ, ವಾಹನಗಳ ಸುಗಮ ಸಂಚಾರ ಮತ್ತು ಪಾದಾಚಾರಿ ಮಾರ್ಗಗಳ ಪರಿಗಣನೆಗೆ ತೆಗೆದುಕೊಳ್ಳತಕ್ಕದ್ದು;

(iv) ವ್ಯಾಪಾರದ ಪ್ರಮಾಣಪತ್ರವನ್ನು ನೀಡುವುದು, ತಡೆಹಿಡಿಯುವುದು, ನವೀಕರಿಸುವುದು, ಅಮಾನತುಗೊಳಿಸುವುದು ಅಥವಾ ರದ್ದುಗೊಳಿಸುವುದು.

(v) ಯೋಜನೆಯಲ್ಲಿ ನಿರ್ದಿಷ್ಟಪಡಿಸಿದಂತೆ ಸಾಮಾಜಿಕ ಲೆಕ್ಕಪರಿಶೋಧನೆ ನಡೆಸುವುದು.

(vi) ಸ್ಥಳೀಯ ಪ್ರಾಧಿಕಾರದ ಶಿಫಾರಸ್ಸಿನ ಮೇಲೆ, ಸ್ವಾಭಾವಿಕ ಮಾರುಕಟ್ಟೆ, ವಾರದ ಮಾರುಕಟ್ಟೆ, ಪರಂಪರಾಗತ ಮಾರುಕಟ್ಟೆ, ಹಬ್ಬದ ಮಾರುಕಟ್ಟೆ, ನಿರ್ದಿಷ್ಟ ಅವಧಿಯಲ್ಲಿ, ನಡೆಯುವ ಮಾರುಕಟ್ಟೆ, ರಾತ್ರಿ ಪೇಟೆ ಬಜಾರು ಮತ್ತು ಅವುಗಳ ನಿಖರ ಸ್ಥಳಗಳೊಂದಿಗೆ ಇರುವ ಗೂಡು (ಪ್ರತಿಮೆ ಅಲಂಕಾರ ವಸ್ತುಗಳು ಇಡುವ) ಮಾರುಕಟ್ಟೆ ಮತ್ತು ಅಥವಾ ಹಬ್ಬದ ಮಾರುಕಟ್ಟೆಯ ಸಂದರ್ಭದಲ್ಲಿ ನಿರ್ದಿಷ್ಟಪಡಿಸಿದ ಅವಧಿ ಮಾರುಕಟ್ಟೆಯನ್ನು ಘೋಷಿಸುವುದು. ಅಂಥ ಮಾರುಕಟ್ಟೆಗಳು ಹೊಸದಾಗಿ ಕ್ರಮ ಕ್ರಮವಾಗಿ ಇರುವಂತಹ ಸಂದರ್ಭದಲ್ಲಿ ಮತ್ತು ಅದು ಅಗತ್ಯವೆಂದು ಭಾವಿಸಬಹುದಾದತಂಥ ಇತರ ಉದ್ದೇಶಗಳಿಗಾಗಿ ಪಡೆಯತಕಕದ್ದು. ಸಮಿತಿಯು, ಆ ಪ್ರದೇಶದ ಸಮೀಕ್ಷೆಯನ್ನು ಅವಶ್ಯವಾಗಿ ನಡೆಸತಕ್ಕದ್ದು.

ಮತ್ತು ಮೇಲೆ ಹೇಳಿದ ಆ ಯಾವುದೇ ವಿವಿದ ರೀತಿಯ ಸನ್ನಿವೇಶಗಳನ್ನು ಅವಲಂಬಿಸಿದ ಮಾರುಕಟ್ಟೆ ಸ್ಥಳವನ್ನು ಘೋಷಿಸುವುದು.

(viii) ಅಧಿನಿಯಮ ಮತ್ತು ನಿಯಮಗಳಲ್ಲಿ ನಿಯಮಿಸಿಲಾದ ಅಂಥ ವಿವರ ಪಟ್ಟಿಕೆಗಳನ್ನು ಕಾಲಕಾಲಕ್ಕೆ ರಾಜ್ಯ ಸರ್ಕಾರಕ್ಕೆ, ಒದಗಿಸತಕ್ಕದ್ದು.

(ix) ಬೀದಿ ವ್ಯಾಪಾರಿಗಳಿಗಾಗಿ ಲಭ್ಯವಿರುವ ಸಾಲ, ವಿಮೆ ಮತ್ತು ಸಾಮಾಜಿಕ ಭದ್ರತೆಯ ಇತರ ಕಲ್ಯಾಣ ಯೋಜನೆಯಗಳ ಅಭಿವೃದ್ಧಿ ಮಾನದಂಡಗಳನ್ನು ಕೈಗೊಳ್ಳುವುದಕ್ಕಾಗಿ ವಿವರಣೆಯನ್ನು ರಾಜ್ಯ ಸರ್ಕಾರಕ್ಕೆ ಒದಗಿಸುವುದು.

(x) ಜನರಲ್ಲಿ ಜಾಗೃತಿ ಉಂಟು ಮಾಡುವುದು ಮತ್ತು ಅರ್ಥವ್ಯವಸ್ಥೆಯಲ್ಲಿ ಬೀದಿ ವ್ಯಾಪಾರಿಗಳ ಪಾತ್ರ,

(xi) ಅಧಿನಿಯಮ ಮತ್ತು ಅದರ ನಿಯಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವುದಕ್ಕಾಗಿ ಸ್ಥಳೀಯ ಪ್ರಾಧಿಕಾರವು ಅಥವಾ ರಾಜ್ಯ ಸರ್ಕಾರವು ಗೊತ್ತುಪಡಿಸಿದ ಅಂಥ ಇತರ ಕರ್ತವ್ಯಗಳನ್ನು ಅದು ನೆರವೇರಿಸುತ್ತದೆ.

**13. ಸಾಮಾಜಿಕ ಅಂಶಗಳಿಗೆ ಉಪಸಮಿತಿ.–**ಪಟ್ಟಣ ವ್ಯಾಪಾರಿ ಸಮಿತಿಯು ಕಾಲಕಾಲಕ್ಕೆ ಉದ್ಭವವಾಗುಬಹುದಾದ ಆ ಯಾವುದೇ ನಿರ್ದಿಷ್ಟ ಅಂಶಗಳ ಬಗ್ಗೆ ಸಲಹೆಗಳೊಂದಿಗೆ ಪರಿಶೀಲಿಸುವುದಕ್ಕೆ ಮತ್ತು ಜಾರಿಗೆ ತರಲು, ಪಟ್ಟಣ ವ್ಯಾಪಾರಿ ಸಮಿತಿಯುಅದರ ಸದಸ್ಯರನ್ನು ಒಳಗೊಂಡ ಉಪ ಸಮಿತಿಯನ್ನು ರಚಿಸಲು ತೀರ್ಮಾನಿಸಬಹುದು ಮತ್ತು ರಚಿಸಬಹುದು.

**14. ಸರ್ಕಾರೇತರ ಸದಸ್ಯರಿಗೆ ಭತ್ಯೆಗಳು.–** ಸರ್ಕಾರೇತರ ಸದಸ್ಯರು, ಪ್ರಯಾಣ ಭತ್ಯೆಯ ಸಂದಾಯ (ಸಮಿತಿಗಳ, ಆಯೋಗಗಳ ಅಥವಾ ಇತರ ಮಂಡಳಿಗಳ ಸರ್ಕಾರೇತರ ಸದಸ್ಯರಿಗೆ) ನಿಯಮಗಳು, 2015 (ಎಫ್‌ಡಿ 3 ಎಸ್‌ಆರ್‌ಎ 2015, ದಿನಾಂಕ:03.08.2015) ಪ್ರಕಾರ ಉಪವೇಶನ ಶುಲ್ಕಕ್ಕೆ ಹಕ್ಕುಳ್ಳವರಾಗಿರತಕ್ಕದ್ದು. ಅವಶ್ಯ ಸಂಖ್ಯೆ(ಕೋರಂ) ಇಲ್ಲದಿರುವ ಸಭೆಗಳ ಸಂದರ್ಭದಲ್ಲಿ, ಅಂಥ ಅವಶ್ಯಸಂಖ್ಯೆ (ಕೋರಂ) ರಹಿತ ಸಭೆಗಳಲ್ಲಿ ಹಾಜರಾಗುವಂತಹ ಸದಸ್ಯರುಗಳಿಗೆ ಉಪವೇಶನ ಶುಲ್ಕದ ಶೇಕಡ ಐವತ್ತರಷ್ಟನ್ನು ಸಂದಾಯ ಮಾಡತಕ್ಕದ್ದು.

**15. ಸಭೆಯಲ್ಲಿ ಭಾಗೀಯಾಗಬೇಕಾದ ವ್ಯಕ್ತಿ.–** ಬೀದಿ ವ್ಯಾಪಾರಕ್ಕೆ ಸಂಬಂಧಪಟ್ಟ ವಿಷಯಗಳ ಬಗ್ಗೆ ಅಭಿಪ್ರಾಯವನ್ನು ತೆಗೆದುಕೊಳ್ಳುವುದಕ್ಕಾಗಿ, ಬೀದಿ ವ್ಯಾಪಾರ ಅಥವಾ ಅವಧಿ ಯೋಜನಾ ಅಂಶಗಳನ್ನು ಒಳಗೊಂಡು ಅನೌಪಚಾರಿಕ ಆರ್ಥಿಕತೆಯ ಕ್ಷೇತ್ರದಲ್ಲಿ ಪ್ರಸಿದ್ಧ ತಜ್ಞರು ಪಟ್ಟಣ ವ್ಯಾಪಾರ ಸಮಿತಿಯ ಸಭೆಯಲ್ಲಿ ಭಾಗಿಯಾಗಬಹುದು, ಅಂಥ ತಜ್ಞರು ಸಭೆಯಲ್ಲಿನ ಚರ್ಚೆಯಲ್ಲಿ ಭಾಗವಹಿಸುವುದಕ್ಕೆ ಹಕ್ಕನ್ನು ಹೊಂದಿರತಕ್ಕದ್ದು, ಆದರೆ ಸಭೆಯಲ್ಲಿ ಮತ ಚಲಾಯಿಸಲು ಹಕ್ಕನ್ನು ಹೊಂದಿರುವುದಿಲ್ಲ. ಅಂಥ ವ್ಯಕ್ತಿಗೆ ಅಧ್ಯಕ್ಷರು ತೀಮಾನಿಸಬಹುದಾದಂತಹ ಪರಿಶ್ರಮ ಧನವನ್ನು ಸಂದಾಯ ಮಾಡತಕ್ಕದ್ದು.

**16. ಸಮಿತಿಯ ನೌಕರರು.–** (1) ಪಟ್ಟಣ ವ್ಯಾಪಾರಿ ಸಮಿತಿಯು, ಸ್ಥಳೀಯ ಪ್ರಾಧಿಕಾರವು ಹಂಚಿಕೆ ಮಾಡಿದ ಸ್ಥಳದಲ್ಲಿ ಅದರ ಖಾಯಂ ಕಚೇರಿಗಳನ್ನು ಹೊಂದಿರತಕ್ಕದ್ದು.

(2) ಸಮಿತಿಯ ಕೋರಿಕೆಯಂತೆ ಅದರ ವೆಚ್ಚದಲ್ಲಿ ಸ್ಥಳೀಯ ಪ್ರಾಧಿಕಾರವು ಸಾಕಷ್ಟು ಸಿಬ್ಬಂದಿಯನ್ನು ಒದಗಿಸತಕ್ಕದ್ದು. ಆದರೆ, ಆಡಳಿತ ವೆಚ್ಚದ ಕಾರಣದಿಂದ ಸಮಿತಿಯು ಖಾಯಂ ಹೊರೆಯು ಉಂಟಾಗತಕ್ಕದ್ದಲ್ಲ.

## ಅಧ್ಯಾಯ–III

## ವಿವಾದಗಳ ನಿವಾರಣಾ ವ್ಯವಸ್ಥೆ

**17. ಕುಂದುಕೊರತೆ ನಿವಾರಣಾ ಸಮಿತಿಯ ರಚನೆ.–** (1) ರಾಜ್ಯ ಸರ್ಕಾರವು, ಬೀದಿ ವ್ಯಾಪಾರಿಗಳ ಕುಂದುಕೂರತೆಗಳ ನಿವಾರಣೆಗಾಗಿ ಅಥವಾ ವಿವಾದಗಳ ಗೊತ್ತುವಳಿಗೆ ಒಂದು ಅಥವಾ ಒಂದಕ್ಕಿಂತ ಹೆಚ್ಚಿನ ಕುಂದುಕೊರತೆ ನಿವಾರಣಾ ಸಮಿತಿಗಳನ್ನು ರಚಿಸತಕ್ಕದ್ದು.

(2) ಕುಂದುಕೊರತೆ ನಿವಾರಣಾ ಸಮಿತಿಯ ಅಧಿಕಾರವ್ಯಾಪ್ತಿಯ ಪ್ರದೇಶವನ್ನು ಮತ್ತು ಕೇಂದ್ರ ಕಾರ್ಯಸ್ಥಾನವನ್ನು ರಾಜ್ಯ ಸರ್ಕಾರ ನಿರ್ಧರಿಸತಕ್ಕದ್ದು.

(3) (ಎ) ಕುಂದುಕೊರತೆ ನಿವಾರಣಾ ಸಮಿತಿಯಲ್ಲಿ ಅಧ್ಯಕ್ಷರನ್ನಾಗಿ ಸಿವಿಲ್ ನ್ಯಾಯಾಧೀಶರನ್ನು ಅಥವಾ ನ್ಯಾಯಿಕ ಮ್ಯಾಜಿಸ್ಟ್ರೇಟರನ್ನು ಮತ್ತು ಇತರ ಇಬ್ಬರು ವ್ಯಕ್ತಿಗಳನ್ನು ಸದಸ್ಯರನ್ನಾಗಿ ರಾಜ್ಯ ಸರ್ಕಾರ ನೇಮಕ ಮಾಡತಕ್ಕದ್ದು.

(ಬಿ) ಸಮಿತಿಯ ಇತರ ಇಬ್ಬರು ಸದಸ್ಯರುಗಳಲ್ಲಿ ಸಮಿತಿಯ ಒಬ್ಬ ಸದಸ್ಯ ನಗರಪಾಲಿಕೆಯ ನಿವೃತ್ತಿಯಾಗಿರುವ ಪುರಸಭೆಯ ಉಪ ಆಯುಕ್ತರು ಅಥವಾ ವಲಯದಲ್ಲಿನ ಪುರಸಭೆಯಲ್ಲಿ ನಿವೃತ್ತರಾಗಿರುವ ಮುಖ್ಯ ಕಾರ್ಯನಿರ್ವಾಹಣಾಧಿಕಾರಿಯಾಗಿರತಕ್ಕದ್ದು ಮತ್ತು ಸಮಿತಿಯ ಇನ್ನೊಬ್ಬ ಸದಸ್ಯರು ಬೀದಿ ವ್ಯಾಪಾರದಲ್ಲಿ ಅದೇ ವಿಭಾಗದಲ್ಲಿ ಒಳಗೊಂಡಿರುವ ಅನೌಪಚಾರಿಕ ಆರ್ಥಿಕತೆಯ ಕ್ಷೇತ್ರದಲ್ಲಿ ಅಪೇಕ್ಷಣೀಯ ಅನುಭವ ಹೊಂದಿರುವ ಪ್ರಖ್ಯಾತ ಸಮಾಜಿಕ ಕಾರ್ಯಕರ್ತರಾಗಿರತಕ್ಕದ್ದು.

(4) ಕುಂದುಕೊರತೆ ನಿವಾರಣಾ ಸಮಿತಿಯ ಕಾಲಾವಧಿ ಮೂರು ವರ್ಷಗಳ ಅವಧಿಯಾಗಿರತಕ್ಕದ್ದು.

(5) ಕುಂದುಕೊರತೆ ನಿವಾರಣಾ ಸಮಿತಿಯ ಅಧ್ಯಕ್ಷರಿಗೆ ಮತ್ತು ಸದಸ್ಯರಿಗೆ ರಾಜ್ಯ ಸರ್ಕಾರವು ಕಾಲಕಾಲಕ್ಕೆ ನಿರ್ಧರಿಸಬಹುದಾದಂತಹ ಗೌರವ ಧನವನ್ನು ಸಂದಾಯ ಮಾಡತಕ್ಕದ್ದು.

**18. ಕುಂದುಕೊರತೆ ನಿವಾರಣಾ ಸಮಿತಿಗೆ ಸಲ್ಲಿಸುವ ಅರ್ಜಿಯ ನಮೂನೆ ಮತ್ತು ವಿಧಾನ.–** (1) ಈ ಅಧಿನಿಯಮದ ಮತ್ತು ನಿಯಮಗಳ (ಅಧಿನಿಯಮದ 11ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದನ್ನು ಹೊರತುಪಡಿಸಿ) ಉಪಬಂಧಗಳ ಮೇರೆಗೆ ಮಾಡಿದ ಯಾವುದೇ ಕಾರ್ಯ ಅಥವಾ ತೆಗೆದುಕೊಂಡ ಯಾವುದೇ ಕ್ರಮಕ್ಕೆ ಸಂಬಂಧಿಸಿದಂತೆ ಕುಂದುಕೊರತೆ ಅಥವಾ ವಿವಾದಗಳನ್ನುಹೊಂದಿರುವ ಯಾರೇ ಬೀದಿ ವ್ಯಾಪಾರಿಯು ಕುಂದುಕೊರತೆ ನಿವಾರಣಾ ಸಮಿತಿಗೆ, ನಮೂನೆ IV ರಲ್ಲಿ ತಾನಾಗಿಯೇ ಆಗಲಿ ಅಥವಾ ತನ್ನ ಪ್ರತಿನಿಧಿಯ ಮುಖಾಂತರವಾಗಲೀ ಆಗಲಿ ಲಿಖಿತ ಅರ್ಜಿಯನ್ನು ಸಲ್ಲಿಸಬಹುದು.

(2) ಕುಂದುಕೊರತೆ ಅಥವಾ ವಿವಾದ ಉಂಟಾದ ಯಾವುದೇ ಘಟನೆ ನಡೆದ ದಿನಾಂಕದಿಂದ ಮೂವತ್ತು ದಿನಗಳ ಅವಧಿಯೊಳಗಾಗಿ ಬೀದಿ ವ್ಯಾಪಾರಿಯು ಅಂಥ ಅರ್ಜಿಯನ್ನು, ದಾಖಲಿಸತಕ್ಕದ್ದು.

(3) ಕುಂದುಕೊರತೆ ನಿವಾರಣಾ ಸಮಿತಿಯು ಈ ಕೆಳಗಿನವುಗಳನ್ನು ಪುರಸ್ಕರಿಸತಕ್ಕದ್ದಲ್ಲ,–

(ಎ) ಅರ್ಜಿಯು ಹೆಸರಿಲ್ಲದ ಅಥವಾ ಅದು ಸಾಮಾನ್ಯ ಮತ್ತು ಅಸ್ಪಷ್ಟ ಆರೋಪಗಳನ್ನು ಒಳಗೊಂಡಿರುವುದನ್ನು ಪುರಸ್ಕರಿಸತಕ್ಕದ್ದಲ್ಲ.

(ಬಿ) ಕಾನೂನು ಯಾವುದೇ ನ್ಯಾಯಾಲಯದಲ್ಲಿ, ನ್ಯಾಯಾಧಿಕರಣ ಅಥವಾ ನ್ಯಾಯಿಕ ಅಥವಾ ಅರೆ–ನ್ಯಾಯಿಕ ಪ್ರಾಧಿಕಾರದಲ್ಲಿ ನ್ಯಾಯ ವಿಚಾರಣಾಧೀನ ವಿಷಯವಾಗಿರುವುದನ್ನು ಪುರಸ್ಕರಿಸತಕ್ಕದ್ದಲ್ಲ.

(ಸಿ) ಅಧಿನಿಯಮದ ವ್ಯಾಪ್ತಿಯನ್ನು ಮೀರಿರುವ ವಿಷಯ, ಮತ್ತು

(ಡಿ) ಅರ್ಜಿದಾರನು ಅರ್ಜಿಯನ್ನು ದಾಖಲಿಸಲು ಅಹವಾಲು ಹೇಳಿಕೊಳ್ಳುವ ಹಕ್ಕು ಹೊಂದಿಲ್ಲದಿರುವುದನ್ನು ಪುರಸ್ಕರಿಸತಕ್ಕದ್ದಲ್ಲ.

**19. ಕುಂದುಕೊರತೆ ನಿವಾರಣಾ ಸಮಿತಿಯ ಮೂಲಕ ಅಹವಾಲನ್ನು ಕೇಳುವ ವಿಧಾನ.–** (1) 18ನೇ ನಿಯಮದ ಮೇರೆಗೆ ಅರ್ಜಿಯನ್ನು ಸ್ವೀಕರಿಸಿದ ಮೇಲೆ ಅದುಮೆಲ್ನೋಟಕ್ಕೆ ಕಂಡುಬರುವುದಕ್ಕೆ ಅರ್ಜಿದಾರನ ಪರವಾಗಿ ಮತ್ತು ಅನುಕೂಲಕರ ರೀತಿಯಲ್ಲಿ ಸರಿಹೊಂದಿಸುವುದಕ್ಕೆ ಸಂಬಂಧಿಸಿದಂತೆ ನಿರ್ಧರಿಸಲುಕುಂದುಕೊರತೆ ನಿವಾರಣಾ ಸಮಿತಿಯು ಅರ್ಜಿದಾರನ ಪ್ರಾರಂಭಿಕ ಅಹವಾಲನ್ನು ಕೇಳತಕ್ಕದ್ದು.

(2) ಪ್ರಾರಂಭಿಕ ಅಹವಾಲಿನ ಫಲಿತಾಂಶವನ್ನು ಅಹವಾಲಿನ ಮುಕ್ತಾಯದಲ್ಲಿ ತಿಳಿಯಪಡಿಸತಕ್ಕದ್ದು ಮತ್ತು ಅದನ್ನು ಲಿಖಿತದಲ್ಲಿ ದಾಖಲಿಸತಕ್ಕದ್ದು ಮತ್ತು ಅದನ್ನು ಅರ್ಜಿದಾರನಿಗೆ ತಿಳಿಸತಕ್ಕದ್ದು, ಲಿಖಿತದಲ್ಲಿ ದಾಖಲಿಸಿದ ಕಾರಣಗಳೊಂದಿಗೆ ಬೀದಿ ವ್ಯಾಪಾರಿಯು ಕೋರಿದರೆ ಸಮಿತಿಯು ಮಧ್ಯಂತರ ಪರಿಹಾರವನ್ನು ಮಂಜೂರು ಮಾಡಬಹುದು ಅಥವಾ ನಿರಾಕರಿಸಬಹುದು.

(3) ಆರೋಪಗಳು ಮೇಲ್ನೋಟಕ್ಕೆ ಕಂಡು ಬಂದ ಸಂದರ್ಭದಲ್ಲಿ ಸಮಿತಿಯು ನಡೆಸುತ್ತಿರುವಲ್ಲಿ ಕುಂದುಕೊರತೆ ಮತ್ತು ವಿವಾದದ ವಿವರಗಳನ್ನು ಒಳಗೊಳ್ಳುವ ಸಾಮಾಜಿಕ ಪ್ರಾಧಿಕಾರಕ್ಕೆ ನೋಟಿಸನ್ನು ನೀಡತಕ್ಕದ್ದು.

(4) ಅಂಥ ನೋಟಿಸನ್ನು ಸ್ವೀಕರಿಸಿದ ಮೇಲೆ ಸಾರ್ವಜನಿಕ ಪ್ರಾಧಿಕಾರವು ಸಮಿತಿಯು ನಿರ್ಧರಿಸುವ ಅವಧಿಯೊಳಗಾಗಿ ಪ್ರತ್ಯುತ್ತರವನ್ನು ದಾಖಲಿಸುವುದು. ಪ್ರತ್ಯುತ್ತರದ ಪ್ರತಿಯನ್ನು ಉಚಿತವಾಗಿ ಬೀದಿ ವ್ಯಾಪಾರಿಗೆ ಸಹ ಒದಗಿಸತಕ್ಕದ್ದು.

(5) ರಾಜ್ಯ ಪ್ರಾಧಿಕಾರದಿಂದ ದಾಖಲಿಸಿದ ಲಿಖಿತ ಪ್ರತ್ಯುತ್ತರವನ್ನು ಸ್ವೀಕರಿಸಿದ ದಿನಾಂಕದಿಂದ ಎರಡು ವಾರಗಳ ಅವಧಿಯೊಳಗೆ ಪ್ರತ್ಯುತ್ತರವನ್ನು ಬೀದಿ ವ್ಯಾಪಾರಿಯು ದಾಖಲಿಸಬಹುದು.

(6) ಅರ್ಜಿದಾರನು ಅಥವಾ ಪ್ರತಿ ಅರ್ಜಿದಾರನು ಮಾಡಿದ ವಾದಾಂಶಗಳ ಸಂಬಂಧದಲ್ಲಿ ಅದರ ಒಬ್ಬ ಸದಸ್ಯರನ್ನು ಅಥವಾ ಸ್ಥಳೀಯ ಪ್ರಾಧಿಕಾರದ ನೌಕರನನ್ನು ನಿಯೋಜಿಸುವ ಮೂಲಕ ಮತ್ತು ಅದರ ಮುಂದೆ ಇಡಲಾದ ದಾಖಲೆಗಳ ಉಲ್ಲೇಖಗಳೊಂದಿಗೆ ಸಹ ಕ್ಷೇತ್ರ ವಿಚಾರಣೆಗಾಗಿ ಕುಂದುಕೊರತೆ ನಿವಾರಣಾ ಸಮಿತಿಯು ಆದೇಶಿಸಬಹುದು.

(7) ಕುಂದುಕೊರತೆ ನಿವಾರಣಾ ಸಮಿತಿ ಇಬ್ಬರು ಪಕ್ಷಕಾರರ ಅಹವಾಲನ್ನು ಆಲಿಸಿದ ನಂತರ, ಎರಡೂ ಪಕ್ಷಕಾರ ಅಹವಾಲು ಮುಕ್ತಾಯಗೊಂಡ ದಿನಾಂಕದಿಂದ ಒಂದು ತಿಂಗಳ ಅವಧಿಯೊಳಗಾಗಿ ತೀರ್ಮಾನ ಕೈಗೊಳ್ಳುವುದಕ್ಕಾಗಿ ಕಾರಣಗಳೊಂದಿಗೆ ಲಿಖಿತದಲ್ಲಿ ಆದೇಶವನ್ನು ಮಾಡಬಹುದು.

(8) ಪುರಸಭಾ ಸಮಿತಿಗೆ ಸಲ್ಲಿಸಿ, ಅಪೀಲಿಗೆ ಅದು ತಡೆಯಾಜ್ಞೆ ನೀಡದ ಹೊರತು ಪಕ್ಷಕಾರರ ಮೇಲೆ ಕುಂದುಕೊರತೆ ನಿವಾರಣಾ ಸಮಿತಿಯ ತೀರ್ಮಾನವು ಬಂಧನಕಾರಿಯಾಗಿರತಕ್ಕದ್ದು.

## ಅಧ್ಯಾಯ–IV

## ಅಪೀಲುಗಳು

**20. ಅಪೀಲನ್ನು ವಿಚಾರಣೆ ಮಾಡಲು ಅಪೀಲು ಸಮಿತಿ.–** (1) ಪ್ರತಿಯೊಂದು ಸ್ಥಳೀಯ ಪ್ರಾಧಿಕಾರವು, 22ನೇ ಮತ್ತು 23ನೇ ನಿಯಮ ಮೇರೆಗೆ ಅಪೀಲನ್ನು ಆಲಿಸುವುದಕ್ಕೆ ಅಪೀಲು ಪ್ರಾಧಿಕಾರವಾಗಿ ಕೆಲಸ ನಿರ್ವಹಿಸುವುದಕ್ಕೆ ಸಾಮಾನ್ಯ ಮಂಡಳಿ ಸಭೆಯಲ್ಲಿ ನಿರ್ಧರಿಸಲಾದಂತೆ ಸ್ಥಳೀಯ ಪ್ರಾಧಿಕಾರದ ಅಧ್ಯಕ್ಷತೆ ವಹಿಸುವ ವ್ಯಕ್ತಿಯು ಮೇಯರ್ ಅಥವಾ ಅಧ್ಯಕ್ಷರು ಮತ್ತು ಇಬ್ಬರು ಇತರ ಸದಸ್ಯರನ್ನು ಒಳಗೊಂಡ ಸಮಿತಿಯನ್ನು ರಚಿಸತಕ್ಕದ್ದು.

**21. ಪಟ್ಟಣ ವ್ಯಾಪಾರಿ ಸಮಿತಿಯ ತೀರ್ಮಾನ ಅಥವಾ ಆದೇಶದ ವಿರುದ್ಧ ಅಪೀಲು.–** ವ್ಯಾಪಾರ ಪ್ರಮಾಣಪತ್ರವನ್ನು ನೀಡುವುದಕ್ಕೆ ಅಥವಾ ವ್ಯಾಪಾರ ಪ್ರಮಾಣಪತ್ರವನ್ನು ರದ್ದುಪಡಿಸುವುದಕ್ಕೆ ಅಥವಾ ಅಮಾನತುಗೊಳಿಸುವುದಕ್ಕೆ ಸಂಬಂಧಪಟ್ಟಂತೆ ಪಟ್ಟಣ ವ್ಯಾಪಾರ ಸಮಿತಿಯ ತೀರ್ಮಾನ ಅಥವಾ ಆದೇಶದಿಂದ ಬಾಧಿತನಾದ ಯಾರೇ ವ್ಯಕ್ತಿ, ಸ್ವತಃ ತಾನೇ ಆಗಲಿ ಅಥವಾ ಅವನ ಪ್ರತಿನಿಧಿಯ ಮುಖಾಂತರವಾಗಲೀ Vನೇ ನಮೂನೆಯಲ್ಲಿ ಪಟ್ಟಣ ಸಮಿತಿಯ ತೀರ್ಮಾನದ

ದಿನಾಂಕದಿಂದ ಮೂವತ್ತು ದಿನಗಳ ಅವಧಿಯೊಳಗೆ 20ನೇ ನಿಯಮ ಮೇರೆಗೆ ರಚಿತವಾದ ಅಪೀಲು ಪ್ರಾಧಿಕಾರಕ್ಕೆ ಅಪೀಲನ್ನು ಸಲ್ಲಿಸಬಹುದು.

(2) (1)ನೇ ಉಪನಿಯಮದಲ್ಲಿ ನಿರ್ದಿಷ್ಟಪಡಿಸಿ ಗೊತ್ತುಪಡಿಸಿದ ಅವಧಿಯು ಮುಕ್ತಾಯವಾದ ತರುವಾಯ ದಾಖಲು ಮಾಡಿದ ಯಾವುದೇ ಅಪೀಲನ್ನು, ಅಪೀಲು ಸಮಿತಿ ಪುರಸ್ಕರಿಸತಕ್ಕದ್ದಲ್ಲ;

ಪರಂತು, ಗೊತ್ತುಪಡಿಸಿದ ಅವಧಿಯೊಳಗೆ ಅಪೀಲನ್ನು ಸಲ್ಲಿಸುವ ಯುಕ್ತ ಕಾರಣದಿಂದ ಅಪೀಲುದಾರನು ನಿರ್ಬಂಧಿಸಿರುವನೆಂದು ಮನದಟ್ಟಾದರೆ ಅಪೀಲು ಪ್ರಾಧಿಕಾರ ವಿಳಂಬವನ್ನು ಮನ್ನಿಸಬಹುದು.

(3) ಅಪೀಲನ್ನು ಸ್ವೀಕರಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗೆ ಅಪೀಲು ಸಮಿತಿಯು ಅಂಥ ಅಪೀಲನ್ನು ವಿಲೆ ಮಾಡತಕ್ಕದ್ದು.

(4) ಅಪೀಲು ಸಮಿತಿಯು, ಎರಡು ಪಕ್ಷಕಾರರ ಅಹವಾಲನ್ನು ಕೇಳಿದ ನಂತರ ಅಂಥಹ ತೀರ್ಮಾನವನ್ನು ತೆಗೆದುಕೊಳ್ಳುವುದಕ್ಕಾಗಿ ಕಾರಣಗಳೊಂದಿಗೆ ಲಿಖಿತದಲ್ಲಿ ಆದೇಶವನ್ನು ಮಾಡತಕ್ಕದ್ದು.

**22. ಕುಂದುಕೊರತೆ ನಿವಾರಣಾ ಸಮಿತಿಯ ತೀರ್ಮಾನ ಅಥವಾ ಆದೇಶದ ವಿರುದ್ಧ ಅಪೀಲು.–** ಕುಂದುಕೊರತೆ ನಿವಾರಣಾ ಸಮಿತಿಯ ತೀರ್ಮಾನದಿಂದ ಬಾಧಿತನಾದ ಯಾರೇ ವ್ಯಕ್ತಿ, ಸ್ವತಃ ತಾನೇ ಆಗಲಿ ಅಥವಾ ಅವನ ಪ್ರತಿನಿಧಿಯ ಮುಖಾಂತರವಾಗಲೀ VIನೇ ನಮೂನೆಯಲ್ಲಿ ಕುಂದುಕೊರತೆ ನಿವಾರಣಾ ಸಮಿತಿಯ ಆದೇಶದ ದಿನಾಂಕದಿಂದ ಮೂವತ್ತು ದಿನಗಳ ಅವಧಿಯೊಳಗೆ 20ನೇ ನಿಯಮ ಮೇರೆಗೆ ರಚಿತವಾದ ಅಪೀಲು ಪ್ರಾಧಿಕಾರಕ್ಕೆ ಲಿಖಿತದಲ್ಲಿ ಅಪೀಲನ್ನು ಸಲ್ಲಿಸಬಹುದು.

(2) (1)ನೇ ಉಪನಿಯಮದಲ್ಲಿ ನಿರ್ದಿಷ್ಟಪಡಿಸಿ ಗೊತ್ತುಪಡಿಸಿದ ಅವಧಿಯು ಮುಕ್ತಾಯವಾದ ತರುವಾಯ ದಾಖಲು ಮಾಡಿದ ಯಾವುದೇ ಅಪೀಲನ್ನು, ಅಪೀಲು ಸಮಿತಿಯು ಪುರಸ್ಕರಿಸತಕ್ಕದ್ದಲ್ಲ;

ಪರಂತು, ಗೊತ್ತುಪಡಿಸಿದ ಅವಧಿಯೊಳಗೆ ಅಪೀಲನ್ನು ಸಲ್ಲಿಸುವ ಯುಕ್ತ ಕಾರಣದಿಂದ ಅಪೀಲುದಾರನು ನಿರ್ಬಂಧಿಸಿರುವನೆಂದು ಮನದಟ್ಟಾದರೆ ಅಪೀಲು ಪ್ರಾಧಿಕಾರ ವಿಳಂಬವನ್ನು ಮನ್ನಿಸಬಹುದು.

(3) ಅಪೀಲು ಸಮಿತಿಯು ಅಪೀಲುಗಳನ್ನು ಸ್ವೀಕರಿಸಿದ ಮೇಲೆ ಅಹವಾಲು ನಡೆಸುವ ದಿನಾಂಕ ಮತ್ತು ಸಮಯವನ್ನು ಸಂಬಂಧಪಟ್ಟ ಪಕ್ಷಕಾರರಿಗೆ ತಿಳಿಸಲು ನೋಟೀಸನ್ನು ನೀಡತಕ್ಕದ್ದು. ಅಹವಾಲು ದಿನಾಂಕವನ್ನು ಅಪೀಲು ದಾಖಲಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗೆ ನಿಗದಿಪಡಿಸತಕ್ಕದ್ದು.

(4) ಅಪೀಲು ಸಮಿತಿಯು, ಎರಡು ಪಕ್ಷಕಾರರ ಅಹವಾಲನ್ನು ಕೇಳಿದ ನಂತರ, ಇಬ್ಬರು ಪಕ್ಷಕಾರರ ಅಹವಾಲನ್ನು ಆಲಿಸಿದ ಮೇಲೆ ನಿರ್ಣಯದ ದಿನಾಂಕದಿಂದ ಮೂವತ್ತು ದಿನಗಳ ಅವಧಿಯೊಳಗೆ ತೀರ್ಮಾನವನ್ನು ತೆಗೆದುಕೊಳ್ಳುವುದಕ್ಕಾಗಿ ಕಾರಣಗಳೊಂದಿಗೆ ಲಿಖಿತದಲ್ಲಿ ಆದೇಶವನ್ನು ಮಾಡತಕ್ಕದ್ದು.

## ಅಧ್ಯಾಯ–V

## ಸಂಕೀರ್ಣ

**23. ಬೀದಿ ವ್ಯಾಪಾರಿಗಳ ದಾಖಲೆಗಳನ್ನು ನಿರ್ವಹಿಸುವ ವಿಧಾನ.–** (1) ಪಟ್ಟಣ ವ್ಯಾಪಾರ ಸಮಿತಿಯ ಕಾಗದದ ದಾಖಲೆಯನ್ನು ಸ್ಥಳೀಯ ಪ್ರಾಧಿಕಾರವು ಹಂಚಿಕೆ ಮಾಡಿದ ಸ್ಥಳದಲ್ಲಿ ಅದರ ಕಾರ್ಯದರ್ಶಿಯು ಅದನ್ನು ನಿರ್ವಹಿಸತಕ್ಕದ್ದು ಮತ್ತು ಅದರ ಸಾಫ್ಟ್(Soft) ಪ್ರತಿಯನ್ನು ಸಹ ಸೂಕ್ತ ರೀತಿಯಲ್ಲಿ ನಿರ್ವಹಿಸತಕ್ಕದ್ದು, ಪಟ್ಟಣ ವ್ಯಾಪಾರ ಸಮಿತಿಯು ತೆಗೆದುಕೊಂಡ ಎಲ್ಲ ತೀರ್ಮಾನಗಳನ್ನು ಗೊತ್ತುಪಡಿಸಿದ ವೆಬ್‌ಸೆಟ್‌ನಲ್ಲಿ ಹಾಕತಕ್ಕದ್ದು.

(2) ಬೀದಿ ವ್ಯಾಪಾರಿಗಳಿಗೆ ಹಂಚಿಕೆ ಮಾಡಿದ ಸ್ಥಳಕ್ಕೆ ಸಂಬಂಧಪಟ್ಟ ದಾಖಲೆಗಳನ್ನು ಹತ್ತು ವರ್ಷಗಳವರೆಗೆ ಇಡತಕ್ಕದ್ದು. ಯಾವುದೇ ಕಾನೂನು ವ್ಯವಹರಣೆಗಳಿಗಾಗಿ ಅಗತ್ಯವಿರುವ ಹೊರತು ಇತರ ದಾಖಲೆಗಳನ್ನು ಐದು ವರ್ಷಗಳವರೆಗೆ ಸಂರಕ್ಷಿಸಬಹುದು.

(3) ಬೀದಿ ವ್ಯಾಪಾರದ ಅಸ್ತಿತ್ವದಲ್ಲಿರುವ ಸ್ಥಳದೊಂದಿಗೆ ಬೀದಿ ಅಥವಾ ರಸ್ತೆ ಯೋಜನೆಯನ್ನುದಾಖಲೆಗಳು ಪಟ್ಟಣ ವ್ಯಾಪಾರ ಸಮಿತಿಯೊಂದಿಗೆ ಖಾಯಂ ಆಗಿ ದಾಖಲೆ ಮಾಡತಕ್ಕದ್ದು.

**24. ಕಾರ್ಯಯೋಜನೆಯ ಸಾರಾಂಶವನ್ನು ಪ್ರಕಟಿಸುವ ವಿಧಾನ.–** ಅಧಿನಿಯಮದ 38ನೇ ಪ್ರಕರಣದ ಮೇರೆಗೆ ರಾಜ್ಯ ಸರ್ಕಾರವು ಅಧಿಸೂಚಿಸಿದ ಕಾರ್ಯಯೋಜನೆಯ ಸಾರಾಂಶವನ್ನು, ಎರಡು ಸ್ಥಳೀಯ ವಾರ್ತಾಪತ್ರಿಕೆಗಳಲ್ಲಿ ಸ್ಥಳೀಯ ಪ್ರಾಧಿಕಾರವು ಪ್ರಕಟಿಸತಕ್ಕದ್ದು ಮತ್ತು ಪಟ್ಟಣ ವ್ಯಾಪಾರಿ ಸಮಿತಿಯ ವೆಬ್‌ಸೈಟ್‌ನಲ್ಲಿ ಸಹ ಅದನ್ನು ಅಪ್‌ಲೋಡ್ ಮಾಡತಕ್ಕದ್ದು. ರಾಜ್ಯ ಸರ್ಕಾರವು ಕಾರ್ಯ ಯೋಜನೆಯನ್ನು ಅಧಿಸೂಚಿಸಿದ ದಿನಾಂಕದಿಂದ ಏಳು ದಿನಗಳೊಳಗಾಗಿ ಸ್ಥಳೀಯ ಪ್ರಾಧಿಕಾರದಿಂದ ಅಂಥ ಪ್ರಕಟಣೆಯನ್ನು ಮಾಡತಕ್ಕದ್ದು.

**25. ರಾಜ್ಯ ಸರ್ಕಾರಕ್ಕೆ ಸಲ್ಲಿಕೆಗಳನ್ನು ಒದಗಿಸುವುದು.–** ಪ್ರತಿಯೊಂದು ಪಟ್ಟಣ ವ್ಯಾಪಾರ ಸಮಿತಿಯು, ನಮೂನೆ VIIರಲ್ಲಿ ನಿರ್ದಿಷ್ಟಪಡಿಸಿದ ವಿವರಗಳೊಂದಿಗೆ 30ನೇ ಪ್ರಕರಣದ ಮೇರೆಗೆ ಅಗತ್ಯಪಡಿಸಿದಂತೆ ಸಲ್ಲಿಕೆಗಳನ್ನು ಕಾಲಕಾಲಕ್ಕೆ ರಾಜ್ಯ ಸರ್ಕಾರಕ್ಕೆ ಒದಗಿಸತಕ್ಕದ್ದು.

**26. ವಾರ್ಷಿಕ ವರದಿ.–** ವಾರ್ಷಿಕ ವರದಿಯನ್ನು, ಹಣಕಾಸು ವರ್ಷ ಮುಕ್ತಾಯಗೊಂಡ ತರುವಾಯ ಮೂರು ತಿಂಗಳೊಳಗೆ ಪಟ್ಟಣ ವ್ಯಾಪಾರ ಸಮಿತಿಯು ವಾರ್ಷಿಕ ವರದಿಯನ್ನು ಸಿದ್ಧಪಡಿಸತಕ್ಕದ್ದು ಮತ್ತು ಗೊತ್ತುಪಡಿಸದ ವೆಬ್‌ಸೆಟ್‌ನಲ್ಲಿ ಅದನ್ನು ಅಪ್‌ಲೋಡ್ ಸಹ ಮಾಡತಕ್ಕದ್ದು.

**27. ಅರ್ಥ ವಿವರಣೆ ಮತ್ತು ತೊಂದರೆಗಳ ನಿವಾರಣೆ.–** ಈ ನಿಯಮಗಳ ಉಪಬಂಧಗಳ ಅನುಷ್ಠಾನಗೊಳಿಸುವಲ್ಲಿ ಅಥವಾ ಯಾವುದೇ ನಿಯಮದ ಅರ್ಥ ವಿವರಣೆಗಾಗಿ ಯಾವುದೇ ತೊಂದರೆಗಳು ಉದ್ಭವಿಸಿದರೆ, ಆ ವಿಷಯಕ್ಕೆ ಸಂಬಂಧಪಟ್ಟಂತೆ ಅದನ್ನು ರಾಜ್ಯ ಸರ್ಕಾರಕ್ಕೆ ಉಲ್ಲೇಖಿಸತಕ್ಕದ್ದು ಮತ್ತು ಅದರ ಮೇಲೆ ಸರ್ಕಾರವು ತೀರ್ಮಾನವೇ ಅಂತಿಮವಾಗಿರತಕ್ಕದ್ದು.

## ಅನುಸೂಚಿ

**(5ನೇ ನಿಯಮ ನೋಡಿ)**

**ಬೀದಿ ವ್ಯಾಪಾರಿಗಳ ಸಮೂಹದಿಂದ ಪಟ್ಟಣ ವ್ಯಾಪಾರ ಸಮಿತಿಯ ಸದಸ್ಯರುಗಳ ಚುನಾವಣೆಯ ವಿಧಾನ**

1. ಸ್ಥಳೀಯ ಪ್ರಾಧಿಕಾರ, ಅಧಿಸೂಚನೆ ಮೂಲಕ, ಸ್ಥಳೀಯ ಪ್ರಾಧಿಕಾರದ ಅಧಿಕಾರ ವ್ಯಾಪ್ತಿಯ ಅಡಿಯಲ್ಲಿ ಆ ಪ್ರದೇಶದ ಬೀದಿ ವ್ಯಾಪಾರಿಗಳನ್ನು ಪ್ರತಿನಿಧಿಸಲು ಪಟ್ಟಣ ವ್ಯಾಪಾರ ಸಮಿತಿಯ ಸದಸ್ಯರುಗಳಿಗೆ ಚುನಾವಣೆ ನಡೆಸುವುದಕ್ಕಾಗಿ ಅದರ ಉದ್ದೇಶವನ್ನು ವ್ಯಕ್ತಪಡಿಸತಕ್ಕದ್ದು.
2. ಸ್ಥಳೀಯ ಪ್ರಾಧಿಕಾರವು ಅದರ ಅಧಿಕಾರ ವ್ಯಾಪ್ತಿಯ ಅಡಿಯಲ್ಲಿ ಬರುವ ಪ್ರದೇಶದ ಬೀದಿ ವ್ಯಾಪಾರಿಗಳನ್ನು ಪ್ರತಿನಿಧಿಸಲು ಪಟ್ಟಣ ವ್ಯಾಪಾರ ಸಮಿತಿಯ ಸದಸ್ಯರುಗಳ ಚುನಾವಣೆಯನ್ನು ನಡೆಸುವ ಉದ್ದೇಶಕ್ಕಾಗಿ ಚುನಾವಣಾಧಿಕಾರಿ (ರಿಟರ್ನಿಂಗ್‌ಆಫಿಸರ್) ಯನ್ನು ನೇಮಿಸತಕ್ಕದ್ದು.
3. (2)ನೇ ಖಂಡದ ಅಡಿಯಲ್ಲಿ ನೇಮಕವಾದ ಚುನಾವಣಾಧಿಕಾರಿ (ರಿಟರ್ನಿಂಗ್ ಆಫಿಸರ್) ಇದರಲ್ಲಿ ಇನ್ನು ಮುಂದೆ ಉಪಬಂಧಿಸಿದ ರೀತಿಯಲ್ಲಿ ಬೀದಿ ವ್ಯಾಪಾರಿಗಳ ಸಮೂಹದಿಂದ ಪಟ್ಟಣ ವ್ಯಾಪಾರ ಸಮಿತಿಯ ಸದಸ್ಯರಿಗೆ ಚುನಾವಣೆಯನ್ನು ನಡೆಸತಕ್ಕದ್ದು.
4. ಸಂಚಾರಿ ವ್ಯಾಪಾರಿ ಬೀದಿ ವ್ಯಾಪಾರಿಗಳಲ್ಲಿ ಮತ್ತು ಸ್ಥಿರ ವ್ಯಾಪಾರಿಯು, ಪಟ್ಟಣ ವ್ಯಾಪಾರ ಸಮಿತಿಯ ಸದಸ್ಯನಾಗಿ ಕರ್ತವ್ಯವನ್ನು ನೆರವೇರಿಸಲು ಅವನು ದೈಹಿಕವಾಗಿ ಅಥವಾ ಮಾನಸಿಕವಾಗಿ ಅಸಮರ್ಥನಾಗಿದ್ದು, ಅವನು ನೈತಿಕ ಅಧಃಪತನವನ್ನು ಒಳಗೊಂಡು ಅಪರಾಧದ ಅಪರಾಧಿ ಎಂದು ನಿರ್ಣೀತನಾಗಿದ್ದರೆ ಪಟ್ಟಣ ವ್ಯಾಪಾರ ಸಮಿತಿಯ ಸದಸ್ಯನಾಗಿ ಚುನಾಯಿತಾನಾಗಲು ಅನರ್ಹಗೊಳಿಸತಕ್ಕದ್ದು.
5. ಸ್ಥಳೀಯ ಪ್ರಾಧಿಕಾರವು, ಅದರ ಅಧಿಕಾರ ವ್ಯಾಪ್ತಿಯ ಪ್ರದೇಶದಲ್ಲಿ ಬೀದಿ ವ್ಯಾಪಾರಿಗಳನ್ನು ಪ್ರತಿನಿಧಿಸುವ ಪಟ್ಟಣ ವ್ಯಾಪಾರಿ ಸಮಿತಿಯ ಸದಸ್ಯರುಗಳ ಚುನಾವಣೆಗಳ ಮೇಲ್ವಿಚಾರಣೆ ಮಾಡತಕ್ಕದ್ದು, ನಿರ್ದೇಶಿಸತಕ್ಕದ್ದು ಮತ್ತು ನಿಯಂತ್ರಿಸತಕ್ಕದ್ದು.
6. ಬೀದಿ ವ್ಯಾಪಾರಿಗಳನ್ನು ಪ್ರತಿನಿಧಿಸುವ ಪಟ್ಟಣ ವ್ಯಾಪಾರ ಸಮಿತಿಯ ಸದಸ್ಯರುಗಳಿಗೆ ಚುನಾವಣೆಗಳನ್ನು ನಡೆಸುವುದಕ್ಕೆ ಸ್ಥಳೀಯ ಪ್ರಾಧಿಕಾರದ ಉದ್ದೇಶವನ್ನು ಅಭಿವ್ಯಕ್ತಿ ಪಡಿಸುವ ಅಧಿಸೂಚನೆಯನ್ನು ಸಾಧ್ಯವಾದಷ್ಟು ಬೇಗನೆ ಹೊರಡಿಸುವುದು ಮತ್ತು ಚುನಾವಣೆ ನಡೆಸುವುದಕ್ಕಾಗಿ ಚುನಾವಣಾ ಅಧಿಕಾರಿಯನ್ನು (ರಿಟ್‌ರ್ನಿಂಗ್ ಆಫೀಸರ್)ನೇಮಿಸುವುದು, ಸ್ಥಳೀಯ ಪ್ರಾಧಿಕಾರವು ಚುನಾವಣೆ ನಡೆಸುವುದಕ್ಕಾಗಿ ದಿನಾಂಕ, ಸಮಯ ಮತ್ತು ಸ್ಥಳವನ್ನು ಗೊತ್ತುವಳಿಯ ಮೂಲಕನಿರ್ಧರಿಸತಕ್ಕದ್ದು.
7. ಸ್ಥಳೀಯ ಪ್ರಾಧಿಕಾರದ ಗೊತ್ತುವಳಿ ಅಥವಾ ತೀರ್ಮಾದ ನೋಟೀಸನ್ನು, ಪಟ್ಟಣ ವ್ಯಾಪಾರ ಸಮಿತಿಯ ಅಧಿಕಾರ ವ್ಯಾಪ್ತಿ ಪ್ರದೇಶದಲ್ಲಿ ಬೀದಿ ವ್ಯಾಪಾರದ ವೃತ್ತಿಯಲ್ಲಿ ತೊಡಗಿಕೊಂಡಿರುವ ಬೀದಿ ವ್ಯಾಪಾರಿಗಳಿಗೆ ಈ ಕೆಳಗಿನ ಯಾವುದೇ ವಿಧಾನಗಳ ಮೂಲಕ ರವಾನಿಸತಕ್ಕದ್ದು, ಎಂದರೆ:–

(ಎ) ಅತಿ ಹೆಚ್ಚು ಪ್ರಸಾರವುಳ್ಳ ಎರಡು ದಿನ ಪತ್ರಿಕೆಗಳಲ್ಲಿ ಪ್ರಕಟಿಸಬೇಕೆಂದು ಸಾರ್ವಜನಿಕ ನೋಟಿಸಿನ ಮೂಲಕ ಅದರಲ್ಲಿ ಒಂದು ಪತ್ರಿಕೆ ಆ ಪ್ರದೇಶದ ಸ್ಥಳೀಯ ಭಾಷೆಯಲ್ಲಿರತಕ್ಕದ್ದು.

(ಬಿ) ಸ್ಥಳೀಯವಾಗಿ ತಲುಪಿಸುವುದರ ಮೂಲಕ;

(ಸಿ) ರವಾನಿಸುವ ಪ್ರಮಾಣಪತ್ರವನ್ನು ಅಂಚೆ ಮೂಲಕ

(ಡಿ) ಸಕ್ಷಮ ಪ್ರಾಧಿಕಾರದೊಂದಿಗೆ ಸೂಕ್ತವಾಗಿ ರಿಜಿಸ್ಟರ್ಡ್ ಮಾಡಿದ ಕೊರಿಯರ್ ಸೇವೆಗಳ ಶೀಘ್ರ ಅಂಚೆ ಮೂಲಕ ಹಾಗೂ ಚುನಾವಣಾಧಿಕಾರಿ (ರಿಟರ್ನಿಂಗ್ ಆಫಿಸರ್) ಕಚೇರಿ ಫಲಕದಲ್ಲಿ ಪ್ರಕಟಿಸುವ ಮೂಲಕ, ಸೂಚನೆಯು ಈ ಮುಂದಿನ ವಿಷಯಕ್ಕೆ ಸಂಬಂಧಿಸಿದ ಮಾಹಿತಿಯನ್ನು ಒಳಗೊಂಡಿರತಕ್ಕದ್ದು.

(i) ಅನುಸೂಚಿತ ಜಾತಿಗಳು, ಅನುಸೂಚಿತ ಬುಡಕಟ್ಟುಗಳು, ಇತರ ಹಿಂದುಳಿದ ವರ್ಗಗಳನ್ನು ಪ್ರತಿನಿಧಿಸುವುದಕ್ಕಾಗಿ ಮೀಸಲಿಟ್ಟ ಸ್ಥಾನಗಳು ಒಳಗೊಂಡು ಚುನಾಯಿತರಾಗುವ ಸದಸ್ಯರುಗಳ ಸಂಖ್ಯೆ.

## ನಮೂನೆ–I

**(5ನೇ ನಿಯಮ ನೋಡಿ)**

**(ಅನುಸೂಚಿ 9ನೇ ಖಂಡ)**

**ಪಟ್ಟಣ ಮಾರಾಟ ಸಮಿತಿಯ ಸದಸ್ಯರುಗಳ ಚುನಾವಣೆಗೆ ನಾಮ ನಿರ್ದೇಶನ ನಮೂನೆ.**

ಇವರಿಗೆ,

ಚುನಾವಣಾಧಿಕಾರಿ,

– – – – – –

ಪಟ್ಟಣ ಮಾರಾಟ ಸಮಿತಿ

– – – – – – – –

ಮಾನ್ಯರೆ,

ಶ್ರೀ – – – – – – ರವರ ಪತ್ನಿ/ ಮಗ/ ಮಗಳು . . . . . ಆದ ನಾನು, ಪಟ್ಟಣ ಮಾರಾಟ ಸಮಿತಿ (ಮಾರಾಟ ನೋಂದಣಿ/ ಪ್ರಮಾಣ ಪತ್ರದ ಸಂಖ್ಯೆ. . . . . . ) ಸಮಿತಿಯ ಅಧಿಕಾರ ವ್ಯಾಪ್ತಿಯ ಪ್ರದೇಶದಲ್ಲಿ ಬೀದಿ ವ್ಯಾಪಾರಿಗಳ ವ್ಯಾಪಾರವನ್ನು ಈ ಮೂಲಕ ಪ್ರಸ್ತಾಪಿಸಿದೆ.ಶ್ರೀ – – – – – – ರವರ ಪತ್ನಿ/ ಮಗ/ ಮಗಳು . . . . . ದ ನಾನು ಪಟ್ಟಣ ಮಾರಾಟ ಸಮಿತಿ (ಮಾರಾಟ ನೋಂದಣಿ/ ಪ್ರಮಾಣ ಪತ್ರದ ಸಂಖ್ಯೆ. . . . . . ) ಸಮಿತಿಯ ಅಧಿಕಾರ ವ್ಯಾಪ್ತಿಯ ಪ್ರದೇಶದಲ್ಲಿ ಬೀದಿ ವ್ಯಾಪಾರಿಗಳ ವ್ಯಾಪಾರವನ್ನು . . . . . ರಂದು ನಡೆಯುವ ಚುನಾವಣೆಗೆ ಸದರಿ ಸಮಿತಿಯ ಸದಸ್ಯ ಹುದ್ದೆಗೆ ಅಭ್ಯರ್ಥಿಯಾಗಿ ಈ ಮೂಲಕ ಹೆಸರನ್ನು ಪ್ರಸ್ತಾಪಿಸಿದೆ.

ಪ್ರಸ್ತಾವಿತರ ಹೆಸರು ಮತ್ತು ಸಹಿ . . . . . . . . . . . . .

ಮಾರಾಟ ನೋಂದಣಿ/ಪ್ರಮಾಣಪತ್ರದ ಸಂಖ್ಯೆ. . . . . . . . . . . .

ಶ್ರೀ – – – – – – ರವರ ಪತ್ನಿ/ ಮಗ/ ಮಗಳು . . . . . ಆದ ನಾನು ಪಟ್ಟಣ ವ್ಯಾಪಾರ ಸಮಿತಿಯ, ವ್ಯಾಪಾರ ನೋಂದಣಿ/ ಪ್ರಮಾಣ ಪತ್ರದ ಸಂಖ್ಯೆ. . . . .ನ್ನು ಈ ಮೂಲಕ ಮೇಲಿನಂತೆ ಎರಡನೇ ಪ್ರಸ್ತಾವವನ್ನು ಸಲ್ಲಿಸುತ್ತಿದ್ದೇನೆ.

ಎರಡನೇ ಪ್ರಸ್ತಾವಿತರ ಹೆಸರು ಮತ್ತು ಸಹಿ . . . . . . . . . . . . .

ಎರಡನೇ ಮಾರಾಟ ನೋಂದಣಿ/ ಪ್ರಮಾಣಪತ್ರದ ಸಂಖ್ಯೆ. . . . . . . . . . . .

### ಅಭ್ಯರ್ಥಿಯಿಂದ ಘೋಷಣೆ

ಶ್ರೀ – – – – – – ರವರ ಪತ್ನಿ/ ಮಗ/ ಮಗಳು . . . . . ದ ನಾನು ಪಟ್ಟಣ ವ್ಯಾಪಾರ ಸಮಿತಿ ವ್ಯಾಪಾರ ನೋಂದಣಿ/ ಪ್ರಮಾಣ ಪತ್ರದ ಸಂಖ್ಯೆ. . . . . . ಪಟ್ಟಣ ವ್ಯಾಪಾರ ಸಮಿತಿಯ ಸದಸ್ಯನಾಗಿ ಚುನಾವಣೆಗೆ ನನ್ನ ನಾಮ ನಿರ್ದೇಶನಕ್ಕೆ ಈ ಮೂಲಕ ಒಪ್ಪಿದ್ದೇನೆ.

(i) ನಾನು ಸದರಿ ಪಟ್ಟಣ ಮಾರಾಟ ಸಮಿತಿಯ ಉದ್ಯೋಗಿಯಾಗಿರುವುದಿಲ್ಲ.

(ii) ನಾನು ಮತ ಚಲಾಯಿಸಲು ಅರ್ಹನಾಗಿದ್ದೇನೆ ಮತ್ತು

(iii) ಬೀದಿ ಮಾರಾಟಗಾರರ (ಜೀವನೋಪಾಯ ಸಂರಕ್ಷಣೆ ಮತ್ತು ಬೀದಿ ವ್ಯಾಪಾರ ನಿಯಂತ್ರಣ) ಅಧಿನಿಯಮ, 2014 (ಕೇಂದ್ರ ಅಧಿನಿಯಮ 2014ರ 7)ರ ಮೇರೆಗೆ ಮತ್ತು . . . . . ಬೀದಿ ವ್ಯಾಪಾರಿಗಳ (ಜೀವನೋಪಾಯ ಸಂರಕ್ಷಣೆ ಮತ್ತು ಬೀದಿ ವ್ಯಾಪಾರ ನಿಯಂತ್ರಣ) ನಿಯಮಗಳು 2015, ಮತ್ತು ಅದರ ಮೇರೆಗೆ ರಚಿಸಿದ ಉಪಬಂಧಗಳ ಮೇರೆಗೆ ಸದರಿ ಪಟ್ಟಣ ವ್ಯಾಪಾರ ಸಮಿತಿಯ ಸದಸ್ಯನಾಗಿ ಚುನಾವಣೆಗೆ ಯಾವುದೇ ಅನರ್ಹತೆಗೆ ಒಳಗಾಗಿಲ್ಲವೆಂದು,

– ನಾನು ಮತ್ತಷ್ಟು ಘೋಷಿಸುತ್ತೇನೆ.

ಅಭ್ಯರ್ಥಿಯ ಹೆಸರು ಮತ್ತು ಸಹಿ . . . . . . . . . . . . .

ವ್ಯಾಪಾರ ನೋಂದಣಿ/ ಪ್ರಮಾಣಪತ್ರದ ಸಂಖ್ಯೆ. . . . . . . . . . . .

**(ಕಚೇರಿ ಉಪಯೋಗಕ್ಕೆ ಮಾತ್ರ)**

ಸ್ವೀಕರಿಸಿದ ನಾಮ ನಿರ್ದೇಶನ ನಮೂನೆ. . . . . . . . (ಸಮಯ ಮತ್ತು ದಿನಾಂಕ)

. . . . . . . ಚುನಾವಣಾಧಿಕಾರಿಯ ಸಹಿ.

ಮೊಹರು

**ಸ್ವೀಕೃತಿ**

. . . . . . ರಂದು . . . . . . ಸಮಯದಲ್ಲಿ ಪೂರ್ವಾಹ್ನ/ ಅಪರಾಹ್ನ ಚುನಾವಣೆಗೆ ಶ್ರೀ/ ಶ್ರೀಮತಿ/ ಕುಮಾರಿ . . . . . ರಿಂದ ಹಾಜರುಪಡಿಸಿದ. . . . . . ನಾಮ ನಿರ್ದೇಶನ ನಮೂನೆಯನ್ನು ಸ್ವೀಕರಿಸಿದೆ.

ಚುನಾವಣಾಧಿಕಾರಿಯ ಸಹಿ. . . .. . .. .

ಮೋಹರು

**ನಮೂನೆ–II**

**(5ನೇ ನಿಯಮ ನೋಡಿ)**

**(ಅನುಸೂಚಿ 15ನೇ ಖಂಡ)**

**ಪಟ್ಟಣ ಮಾರಾಟ ಸಮಿತಿಯ ಸದಸ್ಯರುಗಳ ಚುನಾವಣೆಗೆ ನಾಮ ನಿರ್ದೇಶನ ನಮೂನೆ.**

Iನೇ ಅನುಸೂಚಿಯ ಮೇರೆಗೆ ಚುನಾವಣೆಗಳನ್ನು ನಡೆಸಲು ಪಟ್ಟಣ ವ್ಯಾಪಾರಿ ಸಮಿತಿಯ ಸದಸ್ಯರುಗಳ ಚುನಾವಣೆಯ ಮತಪತ್ರವನ್ನು, ಬೀದಿ ವ್ಯಾಪಾರಿಗಳ (ಜೀವನೋಪಾಯ ಸಂರಕ್ಷಣೆ ಮತ್ತು ಬೀದಿ ವ್ಯಾಪಾರದ ನಿಯಂತ್ರಣ) ನಿಯಮಗಳು, 2015ಕ್ಕೆ ಸೇರಿಸಿದೆ.

. . . . . . . . ಬೀದಿ ವ್ಯಾಪಾರ ಸಮಿತಿ,

. . . . . . . .

. . . . . . . . . . (ವಿಳಾಸ)

(ಸ್ವೀಕೃತಿ ಪ್ರತಿ)

.. . . . . . . . ಹುದ್ದೆಗೆ ಮತಪತ್ರ

. . . . . .. . . ಚುನಾವಣೆ ದಿನಾಂಕ

ಕ್ರಮ ಸಂಖ್ಯೆ. . . . . . . .ವ್ಯಾಪಾರ ನೋಂದಣಿ/ ಪ್ರಮಾಣ ಪತ್ರದ ಸಂಖ್ಯೆ.

ಸಂಖ್ಯೆ. . . . . . . . . . ಮತಪತ್ರ

ಅಭ್ಯರ್ಥಿಗೆ ಸಂಬಂಧಿಸಿದಂತೆ ದಯವಿಟ್ಟು ಒಂದು ಗುರುತು ಹಾಕಿ (X)

| **ಕ್ರಮ ಸಂಖ್ಯೆ** | **ಅಭ್ಯರ್ಥಿಯ ಹೆಸರು** | **ವ್ಯಾಪಾರನೋಂದಣಿ/ ಪ್ರಮಾಣ ಪತ್ರ ಸಂಖ್ಯೆ** | **ನಿರ್ಣಾಯಕ ಮತದ ಗುರುತು** |
|---|---|---|---|
| | | | |

**ನಮೂನೆ–III**

**(5ನೇ ನಿಯಮ ನೋಡಿ)**

**(ಅನುಸೂಚಿ 16ನೇ ಖಂಡ)**

**ಚುನಾವಣಾ ಏಜೆಂಟ್/ ಎಣಿಕೆ ಏಜೆಂಟ್‌ನ ನೇಮಕಾತಿಗಾಗಿ ಪತ್ರ.**

ಶ್ರೀ – – – – – – – ರವರ ಪತ್ನಿ/ ಮಗ/ ಮಗಳು . . . . . ದ ನಾನು ಪಟ್ಟಣ ಮಾರಾಟ ಸಮಿತಿ (ವ್ಯಾಪಾರ ನೋಂದಣಿ/ ಪ್ರಮಾಣ ಪತ್ರದ ಸಂಖ್ಯೆ. . . . . . ) ಸಮಿತಿಯ ಅಧಿಕಾರ ವ್ಯಾಪ್ತಿಯ ಪ್ರದೇಶದಲ್ಲಿ ಬೀದಿ ವ್ಯಾಪಾರಿಗಳ ಮಾರಾಟವನ್ನು ಈ ಮೂಲಕ ಪ್ರಸ್ತಾಪಿಸಿದೆ.ಶ್ರೀ – – – – – – – ರವರ ಪತ್ನಿ/ ಮಗ/ ಮಗಳು . . . . . ದ ನಾನು ಪಟ್ಟಣ ವ್ಯಾಪಾರ ಸಮಿತಿ (ಮಾರಾಟ ನೋಂದಣಿ/ ಪ್ರಮಾಣ ಪತ್ರದ ಸಂಖ್ಯೆ. . . . . . ) ಸಮಿತಿಯ ಅಧಿಕಾರ ವ್ಯಾಪ್ತಿಯ ಪ್ರದೇಶದಲ್ಲಿ ಬೀದಿ ವ್ಯಾಪಾರಿಗಳಿಗೆ . . . . . ರಂದು ಚುನಾವಣೆಯಲ್ಲಿ ನನ್ನ ಚುನಾವಣಾ ಏಜೆಂಟ್‌ನಾಗಿ/ ಎಣಿಕೆ ಏಜೆಂಟ್‌ಗಾಗಿ ಈ ಕೆಳಗಿನ ವ್ಯಕ್ತಿಗಳನ್ನು ಈ ಮೂಲಕ ನಾಮನಿರ್ದೇಶಿಸಿದ್ದೇನೆ. . . . . .ನಡೆಯುವ ಚುನಾವಣೆಗೆ ಸದರಿ ಪಟ್ಟಣ ವ್ಯಾಪಾರ ಸಮಿತಿಯ ಸದಸ್ಯರ ಅಭ್ಯರ್ಥಿಯಾಗಿ ಹೆಸರನ್ನು ಪ್ರಸ್ತಾಪಿಸಿದೆ. (ದಿನಾಂಕವನ್ನು ನಿರ್ದಿಷ್ಟಪಡಿಸುವುದು)

ಅಭ್ಯರ್ಥಿಯ ಹೆಸರು ಮತ್ತು ಸಹಿ . . . . . . . . . . . . .

ವ್ಯಾಪಾರ ನೋಂದಣಿ/ ಪ್ರಮಾಣಪತ್ರದ ಸಂಖ್ಯೆ. . . . . . . . . . . .

ಶ್ರೀ – – – – – – – ರವರ ಪತ್ನಿ/ ಮಗ/ ಮಗಳು . . . . . ಆದ ನಾನು . . . . . . . . . . ಚುನಾವಣಾ ಏಜೆಂಟ್/ ಎಣಿಕೆ ಏಜೆಂಟ್‌ನಾಗಲು ಇಚ್ಛಿಸುತ್ತೇನೆ.

ಏಜೆಂಟ್‌ನ ಸಹಿ

**ನಮೂನೆ–IV**

**(18ನೇ ನಿಯಮ ನೋಡಿ)**

**ಕುಂದುಕೊರತೆಗಳ ನಿವಾರಣಾ ಸಮಿತಿಗೆ ಬಾಧಿತನಾದ ಬೀದಿ ವ್ಯಾಪಾರಿಯಿಂದ ಅರ್ಜಿ**

**ಅರ್ಜಿ ಸಂಖ್ಯೆ:. . . . . . . .. . . 20 . . . . ರ. .**

. . . .. . . . . . . **ಅರ್ಜಿದಾರ**

**ವಿರುದ್ಧ**

. . . . . . . . . . . **ಪ್ರತಿವಾದಿ**

1. ಅರ್ಜಿದಾರನ ಹೆಸರು:
2. ಪತ್ರವ್ಯವಹಾರಕ್ಕಾಗಿ ವಿಳಾಸ:
3. ಸ್ಥಳೀಯ ಪ್ರಾಧಿಕಾರದಿಂದ ನೀಡಲಾದ ಗುರುತು ಚೀಟಿಯ ಸಂಖ್ಯೆ (ನೀಡಿದ್ದರೆ)
4. ವ್ಯಾಪಾರ ಮಾಡಲು ಪ್ರಮಾಣ ಪತ್ರ ಸಂಖ್ಯೆ ಮತ್ತು ದಿನಾಂಕ:
5. ವ್ಯಾಪಾರದ ಸ್ಥಳ ಅಥವಾ ಪ್ರದೇಶ:
6. ವ್ಯಾಪಾರ ವಲಯ ಅಥವಾ ವಾರ್ಡ್
7. ವ್ಯಾಪಾರದ ಸ್ವರೂಪ :
   I. ಮೊಬೈಲ್
   II. ಲೇಖನ ಸಾಮಗ್ರಿ
   III. ಯಾವುದೇ ಇತರ (ನಿರ್ದಿಷ್ಟಪಡಿಸುವುದು)
8. ಕುಂದುಕೊರತಗೆ ಸಂಬಂಧಿಸಿದ ಪ್ರಾಧಿಕಾರ:
9. ವಿವಾದ ಕುಂದುಕೊರತೆಗಳ ವಿವಾದಗಳು: ( ಪೂರ್ಣ ವಿವರಗಳು ನೀಡುವುದು)
10. ವಿವಾದದ ಕುಂದುಕೊರತೆಗೆ ಪೂರಕವಾಗುವ ದಸ್ತಾವೇಜುಗಳು:

11. ಘೋಷಣೆ:

. . . . . . . . . . ಅರ್ಜಿದಾರನಾದ ನಾನು ಮೇಲೆ ಹೇಳಿದ ಅಂಶಗಳು ನನಗೆ ತಿಳಿದಿರುವಷ್ಟರ ಮಟ್ಟಿಗೆ ಮತ್ತು ಮಾಹಿತಿಯಿರುವಷ್ಟರ ಮಟ್ಟಿಗೆ ಸತ್ಯವಾಗಿದೆಯೆಂದು ಮತ್ತು ಈ ನಿಯಮಗಳಲ್ಲಿ ನಿಯಮಿಸಲಾದಂತೆ ಗೊತ್ತುಪಡಿಸಿದ ಸಮಯದೊಳಗೆ ಅರ್ಜಿಯನ್ನು ದಾಖಲಿಸುತ್ತೇನೆಂದು ಶ್ರದ್ಧಾಪೂರ್ವಕವಾಗಿ ಈ ಮೂಲಕ ಘೋಷಿಸುತ್ತೇನೆ.

**ಸ್ಥಳ:**

**ದಿನಾಂಕ:** **ಅರ್ಜಿದಾರನ ಸಹಿ.**

**ಟಿಪ್ಪಣಿ:** ಈ ಅರ್ಜಿಯೊಂದಿಗೆ ಅದಕ್ಕೆ ಸಂಬಂಧಿಸಿದ ಎಲ್ಲಾ ದಸ್ತಾವೇಜುಗಳನ್ನು ಲಗತ್ತಿಸಿದೆ.
ಅಗತ್ಯಪಡಿಸಿದರೆ, ಪ್ರತ್ಯೇಕ ಪಟುಗಳಲ್ಲಿ ವಿವಾದದ ಕುಂದುಕೊರತೆಗಳ ಪೂರ್ಣ ವಿವರಗಳನ್ನು ನೀಡಲು ಈ ಅರ್ಜಿಯೊಂದಿಗೆ ಲಗತ್ತಿಸುವುದು.

**ನಮೂನೆ–VI**

**(22ನೇ ನಿಯಮ ನೋಡಿ)**

**ಕುಂದುಕೊರತೆಗಳ ನಿವಾರಣಾ ಸಮಿತಿಯ ತೀರ್ಮಾನದ ವಿರುದ್ಧ ಸ್ಥಳೀಯ ಪ್ರಾಧಿಕಾರಕ್ಕೆ ಬಾದಿತನಾದ ಬೀದಿ ವ್ಯಾಪಾರಿಯಿಂದ ಅರ್ಜಿ**

**ಅರ್ಜಿ ಸಂಖ್ಯೆ. . . . . . . .. . . 20 . . . . ರ.**

**. . . .. . . . . . . ಅರ್ಜಿದಾರ**

**ವಿರುದ್ಧ**

**. . . . . . . . . . . ಪ್ರತಿವಾದಿ**

1. ಅರ್ಜಿದಾರನ ಹೆಸರು:
2. ಪತ್ರವ್ಯವಹಾರಕ್ಕಾಗಿ ವಿಳಾಸ:
3. ಸ್ಥಳೀಯ ಪ್ರಾಧಿಕಾರದಿಂದ ನೀಡಲಾದ ಗುರುತು ಚೀಟಿಯ ಸಂಖ್ಯೆ (ನೀಡಿದ್ದರೆ)
4. ವ್ಯಾಪಾರ ಮಾಡಲು ಪ್ರಮಾಣ ಪತ್ರದ ಸಂಖ್ಯೆ ಮತ್ತು ನೀಡುವ ದಿನಾಂಕ:
5. ವ್ಯಾಪಾರದ ಸ್ಥಳ ಅಥವಾ ಪ್ರದೇಶ:
6. ವ್ಯಾಪಾರ ವಲಯ ಅಥವಾ ವಾರ್ಡ್:
7. ವ್ಯಾಪಾರದ ಸ್ವರೂಪ :
   I. ಸಂಚಾರಿ
   II. ಒಂದೇ ಕಡೆ ನಿಂತಿರುವ ಸ್ಥಳ
   III. ಯಾವುದೇ ಇತರೆ (ನಿರ್ದಿಷ್ಟಪಡಿಸುವುದು)
8. ಅಪೀಲನ್ನು ಹೂಡುವುದಕ್ಕೆ ಸಂಬಂಧಿಸಿದಂತೆ ಕುಂದುಕೊರತೆ ನಿವಾರಣಾ ಸಮಿತಿಯ ತೀರ್ಮಾನ:
9. ಅಪೀಲಿನ ವಿವರಗಳು ಮತ್ತು ಆಧಾರಗಳು: ( ಪೂರ್ಣ ವಿವರಗಳು ನೀಡುವುದು)
10. ಅಪೀಲಿಗೆ ಪೂರಕವಾದ ದಸ್ತಾವೇಜುಗಳು:
11. ಘೋಷಣೆ:

. . . . . . . . . . ಅರ್ಜಿದಾರನಾದ ನಾನು ಮೇಲೆ ಹೇಳಿದ ಅಂಶಗಳು ನನಗೆ ತಿಳಿದಿರುವಷ್ಟರ ಮಟ್ಟಿಗೆ ಮತ್ತು ಮಾಹಿತಿಯಿರುವಷ್ಟರ ಮಟ್ಟಿಗೆ ಸತ್ಯವಾಗಿದೆಯೆಂದು ಮತ್ತು ಈ ನಿಯಮಗಳಲ್ಲಿ ನಿಯಮಿಸಲಾದಂತೆ ಗೊತ್ತುಪಡಿಸಿದ ಸಮಯದೊಳಗೆ ಅರ್ಜಿಯನ್ನು ದಾಖಲಿಸುತ್ತೇನೆಂದು ಶ್ರದ್ಧಾಪೂರ್ವಕವಾಗಿ ಈ ಮೂಲಕ ಘೋಷಿಸುತ್ತೇನೆ.

**ಸ್ಥಳ:**

**ದಿನಾಂಕ:** **ಅರ್ಜಿದಾರನ ಸಹಿ.**

**ಟಿಪ್ಪಣಿ:** ಈ ಅಪೀಲಿನೊಂದಿಗೆ ಕುಂದುಕೊರತೆ ನಿವಾರಣೆ ಸಮಿತಿಯ ಆದೇಶವನ್ನು ಒಳಗೊಂಡು ಅದಕ್ಕೆ ಸಂಬಂಧಿಸಿದ ಎಲ್ಲಾದಸ್ತಾವೇಜುಗಳನ್ನು ಲಗತ್ತಿಸುವುದು.
ಅಗತ್ಯಪಡಿಸಿದರೆ, ಪ್ರತ್ಯೇಕ ಪಟುಗಳಲ್ಲಿ ಅಪೀಲಿನ ಪೂರ್ಣ ಕಾರಣಗಳನ್ನು ನೀಡಲು ಈ ಅರ್ಜಿಯೊಂದಿಗೆ ಲಗತ್ತಿಸುವುದು.

**ನಮೂನೆ–VII**

**(25ನೇ ನಿಯಮ ನೋಡಿ)**

**ರಾಜ್ಯ ಸರ್ಕಾರಕ್ಕೆ ಒದಗಿಸಬೇಕಾದ ನಿಯತಕಾಲಿಕ ವಿವರ ಪಟ್ಟಿಗಳ ವಿವರಗಳು**

. . . . . . . . . . (ಮಹಾನಗರಪಾಲಿಕೆ ಅಥವಾ ದಂಡು ಪ್ರದೇಶದ ನಗರ ಪಂಚಾಯಿತಿನ ಪೌರಸಭೆ) . . . . . . . . (ಮಾರ್ಚ್) ಜೂನ್, ಸೆಪ್ಟೆಂಬರ್ ಅಥವಾ ಡಿಸೆಂಬರ್) 20. . . . ರ ಮುಕ್ತಾಯದ ತ್ರೈಮಾಸಿಕ ನಿಯತಕಾಲಿಕ ವಿವರಪಟ್ಟಿಯಲ್ಲಿ ಮುಂದಿನ ವಿವರಗಳನ್ನು ಈ ಮೂಲಕ ಸಲ್ಲಿಸಿದೆ.

1. ತ್ರೈಮಾಸಿಕ ಅವಧಿಯಲ್ಲಿ ನೀಡಿದ, ತಿರಸ್ಕೃತಗೊಳಿಸಿದ, ಅಮಾನತುಗೊಳಿಸಿದ ಮತ್ತು ರದ್ದುಗೊಳಿಸಿದ ಪ್ರಮಾಣಪತ್ರದ ವಿವರಗಳು:

| ವಿವರಗಳು | ಅರ್ಜಿಗಳು | ಅಂಗೀಕರಿಸಿದ ಅಥವಾ ನೀಡಿದ | ತಿರಸ್ಕೃತ ಗೊಳಿಸಿದ | ನವೀಕರಿಸಿದ | ಅಮಾನತು ಗೊಳಿಸಿದ | ರದ್ದುಗೊಳಿಸಿದ |
|---|---|---|---|---|---|---|
| ತ್ರೈಮಾಸಿಕ ಅವಧಿಯ ಪ್ರಾರಂಭದಲ್ಲಿ ಇದ್ದಂತೆ ಬಾಕಿ. | | | | | | |
| ಹೊಸದಾಗಿ ಸ್ವೀಕರಿಸಲಾದವುಗಳು | | | | | | |
| ಒಟ್ಟು | | | | | | |
| ತ್ರೈಮಾಸಿಕ ಅವಧಿಯಲ್ಲಿ ತೀರುವಳಿಯಾದವುಗಳು | | | | | | |
| ತ್ರೈಮಾಸಿಕ ಅವಧಿಯ ಮುಕ್ತಾಯದಲ್ಲಿ ಬಾಕಿಯಿರುವವು | | | | | | |

2. ಹೊಸದಾಗಿ ಸಮೀಕ್ಷೆ ಮಾಡಲಾದ ಬೀದಿ ವ್ಯಾಪಾರಿಗಳ ಸಂಖ್ಯೆ ಮತ್ತು ವ್ಯಾಪಾರಿಗಳ ಹೆಸರು, ವಿಳಾಸ, ವ್ಯಾಪಾರದ ಸ್ಥಳ, ವ್ಯಾಪಾರದ ರೀತಿ ಇತ್ಯಾದಿ ಒಳಗೊಂಡಂತೆ ಅವರ ಪೂರ್ಣ ವಿವರಗಳು.
3. ಪಟ್ಟಣ ವ್ಯಾಪಾರಿ ಸಮಿತಿ ನಡೆಸಿರುವ ಸಭೆಗಳ ಸಂಖ್ಯೆ.
4. ಅದರ ನಿಯಂತ್ರಣದಲ್ಲಿ ಯಾವುದಾದರೂ ಇದ್ದರೆ, ಹೊಸದಾಗಿ ವ್ಯಾಪಾರಕ್ಕೆ ಮೀಸಲಿಟ್ಟ ಪ್ರದೇಶದ ವಿವರಗಳು.
5. ಸಾಮಾಜಿಕ ಲೆಕ್ಕಪರಿಶೋಧನೆ ಮಾಡಿದ ವಿವರಗಳು ಯಾವುದಾದರೂ ಇದ್ದರೆ, ಅವು.
6. ಬೀದಿ ವ್ಯಾಪಾರಿಗಳಿಗೆ ಸಾಲ, ವಿಮೆ ಮತ್ತು ಸಾಮಾಜಿಕ ಭದ್ರತೆಯ ಇತರೆ ಕಲ್ಯಾಣ ಯೋಜನೆಗಳು ಲಭ್ಯತೆಗೆ ತೆಗೆದುಕೊಂಡು ಉತ್ತೇಜಿಸುವ ಕ್ರಮಗಳ ವಿವರಗಳು.
7. ರಾಜ್ಯ ಸರ್ಕಾರವು ಕಾಲಕಾಲಕ್ಕೆ ನಿರ್ದೇಶಿಸಲಾದ ಯಾವುದೇ ಇತರೆ ಮಾಹಿತಿ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿದ್ದಿಕ್ ಪಾಷ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು: 250

***RNI No. KARBIL/2001/47147***

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ–***IVA*** | ಬೆಂಗಳೂರು, ಶುಕ್ರವಾರ, ನವೆಂಬರ್ ೪, ೨೦೧೬ (ಕಾರ್ತೀಕ ೧೩, ಶಕ ವರ್ಷ ೧೯೩೮) | ನಂ. ೧೨೩೨ |
| ***Part–IVA*** | ***Bengaluru, Friday, November 4, 2016 (Karthika 13, Shaka Varsha 1938)*** | ***No. 1232*** |


**FINANCE SECRETARIAT**

**NOTIFICATION**

**No. FD 16 PES 2015, Bengaluru, Dated:04-11-2016**

Whereas the draft of the Karnataka Excise Licences (General Conditions) Rules, 1967, was published as required by sub-section (1) of section 71 of the Karnataka Excise Act, 1965 (Karnataka Act 21 of 1966) in Notification No. FD 16 PES 2015, dated: 07.06.2016 in Part-IVA of the Karnataka Gazette (Extra ordinary) No. 801, dated: 07.06.2016 inviting objections and suggestions from all persons likely to be affected within thirty days from the date of its publication in the Official Gazette.

And, whereas the said Gazette was made available to the public on 07th June 2016.

And, whereas objections and suggestions received in respect of the said draft have been considered by the State Government.

Now, therefore, in exercise of the powers conferred by section 71 of the Karnataka Excise Act 1965 (Karnataka Act 21 of 1966) the Government of Karnataka hereby makes the following rules, namely:-

**RULES**

**1**. **Title and commencement**.- (1) These rules may be called the Karnataka Excise Licenses (General Conditions) (Amendment) Rules, 2016.

(2) They shall come into force from the date of their final publication in the official Gazette.

**2. Amendment of rule 1.-** In the Karnataka Excise Licenses (General Conditions) Rules, 1967 (hereinafter referred to as the said rules), in rule 1, for the words and brackets "Karnataka Excise Licenses (General Conditions)" the words and brackets "Karnataka Excise (General Conditions of Licences)" shall be substituted.

**3**. **Amendment of rule 3.-** In rule 3 of the said rules, in sub-rule (1), after the words "Secondary school'', the words "or college or institution" shall be inserted.

**4. Amendment of rule 4-A.-** In rule 4-A of the said rules, the following shall be substituted, namely:-

**"4-A. Closure of shops on certain occasions-**

(i) A licensee may after intimation to the Excise Inspector of the Jurisdictional Range, close the shop on the following occasions, namely:-

(a) on the day of marriage in his family; or

(b) on the day of the occurrence of a death or accident in his family; and

(ii) A licensee may with the prior permission in writing of the Deputy Commissioner of Excise close the shop for renovation or repair of licensed premises for a period not exceeding fifteen days in an Excise Year."

**5. Amendment of rule 5.-** In rule 5 of the said rules, for sub-rule (5), the following shall be substituted, namely:-

"**(5)** The Excise Commissioner may at his discretion and for reasons to be recorded in writing exempt from the application of these rules in the case of distributor licences referred to in clause (11) of rule 3 of the Karnataka Excise (Sale of Indian and Foreign Liquor) Rules, 1968."

**6. Amendment of rule 10-B.-** For rule 10-B of the said rules, the following shall be substituted, namely:-

"**10-B. Prohibition of sale of liquor during election and counting days etc,-** In order to comply with the directions of the Election Commission of India or State Election Commission for banning sale or supply of liquor and intoxicants during election to the House of the People, State Legislative Assembly, Zilla Panchayat, Taluk Panchayat, Gram Panchayat and Urban Local Bodies, the District Magistrate may by notice in writing to the licensee require that any shop in which any liquor is sold or supplied shall be closed at such times and for such period as the Election Commission concerned may consider necessary for conduct of peaceful, fair and free elections. The licensee shall not be entitled to any compensation for such closure".

**7. Omission of rule 14.-** Rule 14 of the said rules shall be omitted.

By Order and in the name of the Governor of Karnataka

**VENKATESH.G**
Under Secretary to Government,
Finance Department(Excise)

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು: 1000

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ–*IVA* | ಬೆಂಗಳೂರು, ಶುಕ್ರವಾರ, ನವೆಂಬರ್ ೪, ೨೦೧೬ (ಕಾರ್ತೀಕ ೧೩, ಶಕ ವರ್ಷ ೧೯೩೮) | ನಂ. ೧೨೩೩ |
| *Part–IVA* | *Bengaluru, Friday, November 4, 2016 (Karthika 13, Shaka Varsha 1938)* | *No. 1233* |


**FINANCE SECRETARIAT**

**NOTIFICATION**

**No. FD 17 PES 2015, Bengaluru, Dated: 04-11-2016**

Whereas the draft of the Karnataka Excise (Sale of Indian and Foreign Liquors) Rules, 1968, was published as required by sub-section (1) of section 71 of the Karnataka Excise Act, 1965 (Karnataka Act 21 of 1966) in Notification No.FD 17 PES 2015, dated:15-09-2016 in Part-IV-A of the Karnataka Gazette (Extra ordinary) No.1081, dated:15-09-2016 inviting objections and suggestions from all persons likely to be affected within thirty days from the date of its publication in the Official Gazette.

And, whereas the said Gazette was made available to the public on $15^{th}$ September 2016.

And, whereas no objections and suggestions were received in respect of the said draft by the State Government.

Now, therefore, in exercise of the powers conferred by section 71 of the Karnataka Excise Act 1965 (Karnataka Act 21 of 1966) the Government of Karnataka hereby makes the following rules, namely:-

**RULES**

**1**. **Title and commencement**:- (1) These rules may be called the Karnataka Excise (Sale of Indian and Foreign Liquors) (Amendment) Rules, 2016.

(2) They shall come into force from the date of their final publication in the official Gazette.

**2. Amendment of Rule 8:-** In the Karnataka Excise (Sale of Indian and Foreign Liquors) Rules, 1968 (hereinafter referred to as the said Rules), in Rule 8, in sub-rule (1), for item (6) and the entries relating thereto, the following shall be substituted, namely:-

| | |
|---|---|
| "6. Special Licences referred to in clause (6) of rule 3 | Rs.10,000 per day" |

**3. Amendment of Form CL-2:-**In Form CL-2 of the said rules, Condition No.2-A and entries relating thereto shall be omitted.

**4. Amendment of Form CL-8:-**In Form CL-8 of the said rules, in Condition No.7, for the words " an Assistant Commissioner", the words "Sub-Inspector of Excise" shall be substituted.

**5. Amendment of Form CL-9:-**In Form CL-9 of the said rules, Condition No.2-A and entries relating thereto shall be omitted.

By Order and in the Name of the Governor of Karnataka

**VENKATESH.G**
Under Secretary to Government,
Finance Department (Excise)

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು: 1000

***RNI No. KARBIL/2001/47147***

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ–***IVA*** | ಬೆಂಗಳೂರು, ಸೋಮವಾರ, ನವೆಂಬರ್ ೭, ೨೦೧೬ (ಕಾರ್ತೀಕ ೧೬, ಶಕ ವರ್ಷ ೧೯೩೮) | ನಂ. ೧೨೪೩ |
|---|---|---|
| ***Part–IVA*** | ***Bengaluru, Monday, November 7, 2016 (Karthika 16, Shaka Varsha 1938)*** | ***No. 1243*** |


**REVENUE SECRETARIAT**

**NOTIFICATION**

**No. RD 84 LRM 2012, Bengaluru, Dated: 07 -11-2016**

The draft of the Karnataka Conferment of Ownership on Mulageni or Volamulageni Tenants Rules, 2015 was published as required by sub section (1) of section 12 of the Karnataka Conferment of Ownership on Mulageni or Volamulageni Tenants Act, 2011 (Karnataka Act 24 of 2012) in Notification No: RD 84 LRM 2012 dated 06-10-2016 in part IVA of the Karnataka Gazette (Extraordinary) dated 06-10-2016 inviting objections or suggestions from all the persons likely to be affected thereby, within fifteen days from the date of its publication in the Official Gazette.

Whereas the said Gazette was made available to public on 06-10-2016. And whereas no objections and suggestions have been received by the State Government within the period specified above.

Now therefore in exercise of the powers conferred by Section 12 of the Karnataka Conferment of Ownership on Mulageni or Volamulageni Tenants Act, 2011 (Karnataka Act 24 of 2012) the Government of Karnataka hereby makes the following rules, namely:-

**RULES**

**1. Title and commencement,-** These rules shall be called the Karnataka Conferment of Ownership on Mulageni or Volamulageni Tenants Rules, 2016.

(2) They shall come into force from the date of their publication in the Official Gazette.

**2. Definitions**,- In these rules, unless the context otherwise requires:-

(a) "Act" means the Karnataka Conferment of Ownership on Mulageni or Volamulageni Tenants Act, 2011; ( Karnataka Act No.24 of 2012)

(b) "Form" means form appended to these rules;

(c) "section" means a section of the Act.

**3. Form of application under section 5**,- (1) Every application made under sub-section (1) of section 5 of the Act shall be in Form I, along with the documents in support of the following information, namely,-

(a) how the applicant derived his title, right or interest in the land as Mulageni or Volamulagenidar;

(b) correct date and description of the documents under which the right is claimed;

(c) a correct description of the land with survey particulars boundaries if necessary to identify the plot, if building or any structure exists the description thereof with door number etc.,

(d) what is the rent paid or payable in respect of the lease-hold in the possession of the applicant, and what is the rent fixed in the lease agreement in respect of the entire lease hold, etc.,;

(e) if the rent is in arrears the same shall be stated and deposited before the competent authority along with the application.

(2) Along with the application all the documents of title to the lease or sub-lease hold land such as lease agreement, documents evidencing possession of such land, rent bond, RTC, rent receipts, Khata Register and documents in support of facts in sub-rule (1), photographs of the building or structure existing etc., shall be filed with a correct list thereof.

(3) In the case of an application under sub-section (4) of section 5 of the Act, certified copy of the application filed before the competent Authority, certified copy of the order of the competent Authority and such other documents as may be considered necessary by the competent authority shall be produced along with the Application.

(4) While filing application, apart from the original, as many copies as there are respondents shall be enclosed.

**4. Form of Notice and manner of serving by the competent Authority under section 6,-** (1) As soon as after registering the application, the competent Authority shall fix a date for appearance of the respondent or respondents for holding enquiry. The competent Authority shall issue notice of enquiry specifying the date, place and time of the enquiry to the applicant and respondent or respondents, in Form II.

(2) On the date intimated in the notice under sub rule (1) the respondent or respondents shall file his statement, evidence and documents supporting his statement. A true and correct copy of such statement shall be furnished to the applicant.

**5. Mode of enquiry,-** (1) The Competent Authority shall hold a summary enquiry. The parties shall file sworn affidavits in support of their case apart from other documentary evidence. The parties shall have the right to cross-examine the opposite parties and their witnesses.

(2) Even after the notice of enquiry in Form II is duly served on the date fixed and intimate if the Respondent or Respondents fail to appear before the competent authority, he or such of them who are absent shall be set exparte and enquiry be continued according to law:

Provide that, if the party who is set exparte subsequently appears before the Competent Authority and submits adequate reasons for his default, the order may be set aside and he may be allowed to participate in the enquiry.

(3) The Competent Authority shall record correctly and minutely the proceedings of enquiry and summary of the oral evidence and answer to the questions in cross-examination of the parties and witnesses, and the same shall be signed by the parties or witnesses as the case may be.

(4) Provisions of the Civil Procedure Code, 1908, be followed in all enquiries.

**6. Form of certificate ownership under section 8,-** The Form of certificate of ownership shall be in Form III.

**7. Appearance of representatives of the parties, Advocates before competent Authority,-** Appearance of representatives of the parties Advocates or duly authorized persons shall be entitled to represent the parties in any proceedings before the Competent Authority.

**8. Manner of registration of certificate of ownership by the registering Officer –** "Certificate of ownership issued by the Competent Authority shall be presented for registration by the applicant, within four months from the date of issue of the Certificate of ownership, before the concerned registering officer, appointed under the Registration Act, 1908, who shall register the same in accordance with the provisions of law applicable thereto" .

By order and in the name of the Governor of Karnataka,

**S.L. MAHANTHEGOWDA**
Under Secretary to Govt.
Revenue Department
(Land Reforms)

**Form I**

**(see rule 3)**

Before the Competent Authority ……………..Taluk, Dist:

Application No:…………..

1. Sri. A.B. (Name or names and Postal)
2. Address

V/s

Sri.C.D. (Name or names and Postal address

1. - Respondent/s
2.

**Application under section 5 of the Karnataka Conferment of Ownership on Mulageni or Volamulageni Tenants Act, 2011**

The Applicant/s submits as follows:-

1. The Applicant is a Mulageni tenant etc…………..
   (State briefly the facts relevant to the case specified in clauses (a) to (e) of Sub-rule (3)

Therefore the Applicant prays for…….

Place:
Date: Signature of the Applicant

Received the Application

Place:
Date:

Competent Authority
(Tahsildar)

Seal,

**Form II**
**(see rule 6)**
**Notice to Parties**

Office of the Competent Authority
Application No,:…………………….

1. Sri. (Name of the Applicant) - Applicant/s

Vs

2. Sri ( Name of the Respondent) - Respondent/s

**Notice of Enquiry under section 6 of the Karnataka Conferment of Ownership on Mulageni or Volamulageni Tenants Act, 2011**
**(Karnataka Act 24 of 2012)**

Please take notice that the Applicant/s has filed an Application under section 5 of the Karnataka Conferment of Ownership on Mulageni or Volamulageni Tenants Act, 2011 for conferment of ownership as per the enclosed copy of the Application. The case is posted for your appearance before the Competent Authority………….at 11 a.m. You shall appear before the Competent Authority on the said day either in person or through any legally empowered person and file statement/objections and produce evidence etc., before the Competent Authority. If you fail to comply herewith the proceedings will be proceeded, treating you exparte, in accordance with law.

Place:

Competent Authority
Date:

Seal.

